ಶ್ರೀಃ

# ಅಭಿಷೇಕ ನಾಟಕ



( ಭಾಸ ಮಹಾಕವಿ ಕೃತ ಸಂಸ್ಕೃತ ನಾಟಕದ
ಕನ್ನಡ ಗದ್ಯಾನುವಾದ )

ಪಾ॥ ನ್ಯಂ ಸುಂದರಶಾಸ್ತ್ರಿಯವರಿಂದ ಪರಿವೃತ್ತಿಯನ್ನು ಪಡೆದುದು



ಬೆಲೆ ೦-೬-೦

ಇದನ್ನು ಶ್ರೀ ಎಚ್. ಎಫ್. ಕಟ್ಟೀಮನಿ, ಬಿಎ. ಇವರು ಧಾರವಾಡದಲ್ಲಿ ಶ್ರೀತೋಂಟದ ಸಿದ್ಧಲಿಂಗವಿಜಯ ಮುದ್ರಾಲಯದಲ್ಲಿ ಮುದ್ರಿಸಿದರು.

ಮತ್ತು

ಶ್ರೀ ಕೆ. ಬಿ. ಅಂಕಲಗಿ, ಇವರು ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಪ್ರಸಿದ್ಧಿಸಿದರು.

# ಪ್ರಕಾಶಕರ ಮುನ್ನುಡಿ.

ಸಂಸ್ಕೃತ ಸಾಹಿತ್ಯದಲ್ಲಿ ದೇದೀಪ್ಯಮಾನವಾದ ಭಾಸಕವಿಯ ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸುವ ಶ್ರೀ. ಶಾಸ್ತ್ರಿಯವರ ಪ್ರಯತ್ನವು ತುಂಬಾ ಸ್ತುತ್ಯವಾದುದೆಂದು ಪುನಃ ಹೇಳಬೇಕಾದ ಆವಶ್ಯಕತೆಯಿಲ್ಲ. ಆರು ಚಿಕ್ಕ ಚಿಕ್ಕ ಅಂಕಗಳನ್ನೊಳಕೊಂಡ ಈ ನಾಟಕವು ಕರ್ನಾಟಕ ಸಾಹಿತ್ಯದಲ್ಲಿ ತಕ್ಕ ಪ್ರಾಶಸ್ತ್ಯವನ್ನು ಪಡೆಯಲೆಂದೂ ಶ್ರೀ. ಶಾಸ್ತ್ರಿಯವರ ಮುಂದಿನ ಭಾಷಾಸೇವೆಯ ಕಾರ್ಯಕ್ಕೆ ತಕ್ಕಷ್ಟು ಸ್ಫೂರ್ತಿಯನ್ನು ದೊರಕಿಸಿಕೊಡಲೆಂದೂ ನಮ್ಮ ಕೋರಿಕೆಯಿದೆ. ಇದರಲ್ಲಿ ಅಡಕವಾದ ಪೌರಾಣಿಕ ಕಥಾಭಾಗವು ಸರ್ವವಿಶ್ರುತವಾಗಿರುವುದರಿಂದಲೂ ಮೂಲ ನಾಟಕ ಕರ್ತೃವಾದ ಭಾಸನು ನಮ್ಮ ಪುರಾತನ ಕವಿಸಾಮ್ರಾಜ್ಯದಲ್ಲಿ ಕಾಲ ಕಾಲಕ್ಕೆ ವಿರಾಜಿಸಿದಅನೇಕ ಸಾಮ್ರಾಟರಲ್ಲೊಬ್ಬನಾಗಿರುವುದರಿಂದಲೂ ಪ್ರಸ್ತುತ ಗ್ರಂಥದ ವಿಷಯದಹಾಗು ವಿವೇಚನಾ ಕ್ರಮದ ಸಂಬಂಧದಿಂದ ನಾವು ಹೇಳಬೇಕಾದುದೇನೂ ಉಳಿದಿಲ್ಲ. ಗ್ರಂಥದ ಭಾಷೆಯು ಪ್ರಶಸ್ತವೂ ಸಮಯೋಚಿತವಾದುದೂ ಆಗಿ ಓದುಗರಿಗೆ ಸ್ಫೂರ್ತಿದಾಯಕವಾಗಿದೆ. ಕ. ವಿ. ವ. ಸಂಘದ ಚಾಲಕರು ಈ ವರ್ಷ ಇದಕ್ಕೆ ತಕ್ಕ ಬಹುಮಾನವನ್ನು ಅರ್ಪಿಸಿರುವರೆಂದು ಹೇಳಲು ಆನಂದವಾಗುವುದು.

ಕೊನೆಗೆ ತಮ್ಮ ಈ ಕೃತಿಯನ್ನು ವಾಗ್ಭೂಷಣದಲ್ಲಿ ಪ್ರಕಟಿಸಲು ಸಮ್ಮತಿಸಿದುದಕ್ಕೆ ಶ್ರೀ. ಶಾಸ್ತ್ರಿಯವರ ಉಪಕಾರವೆಣಿಸಿ ಸದಯ ಹೃದಯರಾದ ಕರ್ನಾಟಕ ಬಂಧುಗಳು ಇಂತಹ ಸಾಹಿತ್ಯಸೇವಕರನ್ನೂ ವಾಗ್ಭೂಷಣವನ್ನೂ ಪ್ರೋತ್ಸಾಹಿಸಿ ಶ್ರೇಯೋವಂತರಾಗಲೆಂದು ಕೋರಿ ಈ ಚಿಕ್ಕ ಮುನ್ನುಡಿಯನ್ನು ಮುಗಿಸುವೆವು.

ಶ್ರೀ. ಚಾಮರಾಜ ಮಂದಿರ,
ಧಾರವಾಡ; ೧೯೩೬. } ಕೆ. ಬಿ. ಅಂಕಲಗಿ,

ಶ್ರೀ

|| ಶ್ರೀಃ ||

# ಪೀಠಿಕೆ

ಭಾಸ ಮಹಾಕವಿಯ ಸಂಸ್ಕೃತನಾಟಕದ ಪರಿವರ್ತನವೆನಿಸಿದ ಈ ರೂಪಕವು ಶ್ರೀ ಮದ್ರಾಮಾಯಣದಲ್ಲಿನ ಕಿಷ್ಕಿಂಧಾಕಾಂಡದಲ್ಲಿ ರಾಮಲಕ್ಷ್ಮಣರು ಸೀತೆಯನ್ನು ಹುಡುಕುತ್ತ ಬಂದು ಸುಗ್ರೀವನೊಂದಿಗೆ ಮೈತ್ರಿಯನ್ನು ಬೆಳೆಯಿಸಿದ ಪ್ರಕರಣವನ್ನು ಮೊದಲು ಮಾಡಿ, ಅಯೋಧ್ಯಾರಾಜ್ಯಾಧಿಪತ್ಯದಲ್ಲಿ ರಾಮನು ಅಭಿಷಿಕ್ತನಾಗುವವರೆಗಿನ ಕಥೆಯನ್ನು ಆರು ಅಂಕಗಳಲ್ಲಿ ಒಳಗೊಂಡಿರುವುದು. ವರ್ಣನೆಯು ಅಷ್ಟೊಂದು ವಿಶೇಷ ಚಮತ್ಕಾರವನ್ನು ತೋರ್ಪಡಿಸಿದ್ದರೂ ಕಥಾಸಂವಿಧಾನವು ಮಾತ್ರ ಮನೋಹರವಾಗಿಯೇ ಇರುವದು. ಆರನೆಯ ಅಂಕದಲ್ಲಿ ರಾಮರಾಜ್ಯಾಭಿಷೇಕವು, ಅಗ್ನಿದೇವನನ್ನು ಮುಂದಿಟ್ಟು ದೇವತೆಗಳ ಅನುಮೋದನಾನುಸಾರ ಲಂಕೆಯಲ್ಲಿಯೇ ನಡೆದಿರುವದು. ಹಿಂದೆ ಯೌವರಾಜ್ಯಾಭಿಷೇಕ ಭಗ್ನಪ್ರಯತ್ನನಾದ ದಶರಥನು ಈ ಅಭಿಷೇಕ ಕಾಲದಲ್ಲಿ ದೇವತೆಗಳ ಮೂಲಕ ತನ್ನ ಇಷ್ಟಾರ್ಥವನ್ನು ಸಫಲಗೊಳಿಸಿದಂತೆ ತಿಳಿಯಬರುವುದು.

ಈ ರೂಪಕವನ್ನು ಅನೌಲ್ಯವಾದ ತಮ್ಮ ಮಾಸಪತ್ರಿಕೆಯಲ್ಲಿ ಪ್ರಕಟಿಸಿದ "ವಾಗ್ಭೂಷಣ" ಪತ್ರಿಕಾ ಪ್ರಚಾರಕರ ಭಾಷಾಭಿಮಾನವು ಶ್ಲಾಘನೀಯವಾಗಿರುವದು. ಭಾಸಕವಿಯ ಇತರ ಗದ್ಯಾನುವಾದಗಳಂತೆಯೇ ಈ ಗ್ರಂಥವೂ ಮ|| ಬಿ. ರಾಮರಾವ್ ಎಂ. ಎ. ಎಲ್ ಎಲ್ ಬಿ; ಅವರಿಗೆ ಸಮರ್ಪಿತವಾಗಿರುವುದು. ವಾಚಕರು ಇದರಲ್ಲಿನ ನ್ಯೂನಾತಿರಿಕ್ತಗಳನ್ನು ಸೂಚಿಸಿದಲ್ಲಿ ಮುಂದಣ ಮುದ್ರಣದಲ್ಲಿ ಸರಿಪಡಿಸುವೆನು.

ರಕ್ತಾಕ್ಷಿ ಸಂ. ಕಾರ್ತಿಕ ಶು. ೧<br>ಬುಧವಾರ.<br>೨೯-೧೦-೨೪.

ಇಂತು ವಿದ್ವದ್ವಿಧೇಯ,<br>ಪಾನ್ಯಂ. ಸುಂದರಶರ್ಮ,<br>ಗ್ರಂಥಕರ್ತ.

॥ ಶ್ರೀ ॥

ಶ್ರೀಶಾರದಾಂಬಾಯೈ ನಮಃ

## ಮಹಾಕವಿಭಾಸನ

# ಅಭಿಷೇಕನಾಟಕ.



## ಒಂದನೆ ಅಂಕ.

(ನಾಂದಿಯ ಅನಂತರ ಸೂತ್ರಧಾರನ ಪ್ರವೇಶ.)

**ಸೂತ್ರಧಾರ**—ಗಾಧಿತನಯನ ಯಜನವಿಘ್ನಕಾರಿಗಳನ್ನು ಕೊಂಡು, ಯುದ್ಧದಲ್ಲಿ ವಿರಾಧ ಖರ ದೂಷಣರ ಶೌರ್ಯವನ್ನು ಸೂರೆಗೊಂಡು, ಕೆಚ್ಚಿನಿಂದ ಮೆರೆಯುತ್ತಿದ್ದ ಕಬಂಧ ವಾಲಿಗಳನ್ನು ನಾಶಮಾಡಿದ ರಾಕ್ಷಸಕುಲಾಂತಕನು ನಿಮ್ಮನ್ನು ಸಲಹಲಿ!

ಆರ್ಯಮಿಶ್ರರನ್ನು ಕುರಿತು ಈರೀತಿ ಬಿನ್ನವಿಸುವೆನು. ಏನಿದು? ನಾನು ಬಿನ್ನವಿಸಲು ತವಕಗೊಂಡಿರುವಲ್ಲಿ ಯಾವುದೋ ಸಪ್ಪಳವು ಕೇಳಿಬರುತ್ತಿರುವದು! ಅಯ್ಯೋ! ನೋಡುವೆನು.

(ತೆರೆಯಲ್ಲಿ)

ಸುಗ್ರೀವಾ! ಇತ್ತ, ಇತ್ತ.

**ಪಾರಿಪಾರ್ಶ್ವಕ**--(ಪ್ರವೇಶಿಸಿ) ಭಾವಾ! ಬಿರುಗಾಳಿಯ ಪೆಟ್ಟಿನಿಂದ ಭಯಂಕರವಾದ ರೀತಿಯಲ್ಲಿ ಹರಿದಾಡುತ್ತಾ ಅಂತರಿಕ್ಷದಲ್ಲಿ ಗರ್ಜಿಸುತ್ತಿರುವ ಮೇಘಧ್ವನಿಯೋ ಎಂಬಂತೆ ಕರ್ಣಕುಹರವನ್ನು ಸೀಳುವ ಈ ದೊಡ್ಡ ಸಪ್ಪಳವು ಎಲ್ಲಿಂದ ಬರುತ್ತಿರಬಹುದು?

**ಸೂತ್ರ.**—ಮಾರಿಷ! ತಿಳಿಯಲಿಲ್ಲವೇನು? ಸೀತಾಪಹರಣದಿಂದ ಸಂತಪ್ತನೆನಿಸಿ ರಘುಕುಲಪ್ರದೀಪನೂ ಸಕಲಲೋಕನೇತ್ರಾನಂದಕರನಾದ ರಾಮನಿಗೂ, ದಾರಾಪಹರಣದಿಂದ ತಿರಸ್ಕೃತನಾಗಿ ಸಕಲಕಪಿ ಸೇನಾಧಿಪನೂ ವಿಪುಲಗ್ರೀವನೂ ಎನಿಸಿದ ಸುಗ್ರೀವನಿಗೂ, ಪರಸ್ಪರವಾಗಿ ಉಪಕಾರಮಾಡುವಂತೆ ಪ್ರತಿಜ್ಞೆಯು ನಡೆದು, ಸಕಲವಾನರ ರಾಜನೆನಿಸಿದ ಹೇಮಮಾಲಿಯಾದ ವಾಲಿಯನ್ನು ಕೊಲ್ಲುವ ಸಲುವಾಗಿ ಸನ್ನಾಹವು ನಡೆಯುತ್ತಿರುವುದು.

ಇವರಾದರೆ:—ರಾಜ್ಯಭ್ರಷ್ಟನಾದ ಇಂದ್ರನನ್ನು ಪ್ರತಿಷ್ಠೆಗೊಳಿಸಲು ಬಂದ ಹರಿಹರರೋ ಎಂಬಂತೆ ಸುಗ್ರೀವನನ್ನು ಈಗ ನೆಲೆಗೊಳಿಸುವದಕ್ಕಾಗಿ ಬಂದಿರುವ ರಾಮ ಲಕ್ಷ್ಮಣರು. (ಎಂದಿಬ್ಬರೂ ತೆರಳುವರು)

ಇಂತಿದು ಸ್ಥಾಪನೆ.

---

(ರಾಮ ಲಕ್ಷ್ಮಣ ಸುಗ್ರೀವ ಹನೂಮಂತರ ಪ್ರವೇಶ)

**ರಾಮ**—ಸುಗ್ರೀವಾ! ಇತ್ತ, ಇತ್ತ. ನನ್ನ ಬಾಣದ ಪೆಟ್ಟಿನಿಂದ ಸೀಳಿ ಪುಡಿಪುಡಿಯಾದ ದೇಹಬಂಧವುಳ್ಳ ನಿನ್ನ ಹಗೆಯನ್ನು ಹಠಾತ್ತಾಗಿ ಇಗೋ ನಾನೀಗಲೇ ನೆಲಕ್ಕೆ ಕೆಡಹುವೆನು. ರಾಜನೆ! ಹೆದರದಿರು. ನನ್ನ ಹತ್ತಿರ ಇರುವೆಯಲ್ಲವೆ! ಯುದ್ಧದಲ್ಲಿ ನಿಹತನಾದ ಆ ವಾಲಿಯನ್ನು ನೀನು ನೋಡಿದಂತೆ ತಿಳಿ.

**ಸುಗ್ರೀವ**—ದೇವಾ! ಆರ್ಯನ ಅನುಗ್ರಹದಿಂದ ದೇವರಾಜ್ಯವನ್ನೂ ಗಳಿಸಬಲ್ಲೆನು. ಈವಾನರ ರಾಜ್ಯವೂ ಒಂದು ದೊಡ್ಡದೇ? ಏತಕ್ಕೆಂದರೆ:—

ದೇವಾ! ಶ್ರೀಧರಾ! ತುಹಿನಗಿರಿಶಿಖರಗಳಂತೆ ಕಂಗೊಳಿಸುತ್ತಿದ್ದ ಏಳು ಸಾಲಮರಗಳನ್ನೂ ಭೇದಿಸಿ, ವೇಗವು ಕಡಿಮೆಯಾಗದ ಕಾರಣ ಭೂಮಿಯನ್ನು ಬಗೆದು ಪಾತಾಳವನ್ನು ಹೊಕ್ಕು ಮರಳಿ ಸಮುದ್ರದಲ್ಲಿ ಮಿಂದು ಈ ಬಾಣವು ಮರಳಿ ನಿನ್ನಬತ್ತಳಿಕೆಯನ್ನೇ ಸೇರಿತು. ವೀರಾ! "ವಾಲಿಹೃದಯವನ್ನು ನೀನು ಭೇದಿಸಲಾರೆ" ಎಂಬ ಸಂಶಯವು ತೊಲಗಿತು.

**ಹನೂ.**—ನರಪಾಲಕನೆ! ನಿನ್ನ ಮುಖದಿಂದ ಹೊರಟ ಮಾತುಗಳಿಂದಲೇ ನಮ್ಮ ಭಯವು ದೂರವಾಯಿತು. ನಾವು ದುಃಖವನ್ನು ದಾಟಿದೆವು. ರಘುವರನೆ! ಕಪಿಗೆ ಜಯಪ್ರದಾನ ಮಾಡುವ ಸಲುವಾಗಿ ಕಾರ್ಮುಗಿಲಿನಂತೆ ಕಂಗೊಳಿಸುವ ಆ ಪರ್ವತವನ್ನು ಕುರಿತು ತೆರಳು.

**ಲಕ್ಷ್ಮಣ**—ಅಣ್ಣಾ! ಈ ವನಾಂತವು ಸುತ್ತಲೂ ದಟ್ಟವಾಗಿ ಮಿನುಗುತ್ತಿರುವುದು. ಇದರ ಹತ್ತಿರಲೇ ಕಿಷ್ಕಿಂಧೆಯು ಇರಬೇಕು.

**ಸುಗ್ರೀವ**—ಕುಮಾರನು ಚೆನ್ನಾಗಿ ಹೇಳಿದನು.

ಅರಸನೆ! ನಿನ್ನ ಬಾಹುಬಲದಿಂದ ಸುರಕ್ಷಿತರಾದ ನಾವು ಕಪಿವರನ ಬಾಹುಬಲದಿಂದ ಸುರಕ್ಷಿತವಾದ ಕಿಷ್ಕಿಂಧೆಯನ್ನು ಸೇರಿದೆವು. ನರಪುಂಗವಾ! ನೀನಿಲ್ಲಿಯೇ ಇರು. ಸಿಂಹನಾದದಿಂದ ಪರ್ವತಗಳನ್ನು ನಡುಗಿಸಿ ಭೂಲೋಕವನ್ನು ತತ್ತರಗೊಳಿಸುವೆನು.

**ರಾಮ.**—ಒಳ್ಳೆಯದು. ನಡೆ.

**ಸುಗ್ರೀವ.**—ಸ್ವಾಮಿಯ ಅಪ್ಪಣೆ (ಎಂದು ನಡೆತಂದು)

ಎಲೈರಾಜನೆ! ಯಾವ ಅಪರಾಧವೂ ಇಲ್ಲದಿದ್ದರೂ ನಿನ್ನಿಂದ ಪರಿತ್ಯಕ್ತನಾದ ಸುಗ್ರೀವನು ರಣಮುಖದಲ್ಲಿ ನಿನ್ನ ಚರಣಶುಶ್ರೂಷೆಯನ್ನು ಮಾಡ ಬಯಸುವನು.

(ತೆರೆಯಲ್ಲಿ)

ಹೇಗೆ? ಹೇಗೆ? ಸುಗ್ರೀವನೆಂತಲೊ?

(ವಾಲಿಯೂ ಸೆರಗನ್ನ ಹಿಡಿದು ಅಡ್ಡಗಿಸುವ ತಾರೆಯೂ ಪ್ರವೇಶಿಸುವರು)

**ವಾಲಿ**—ಹೇಗೆ? ಹೇಗೆ? ಸುಗ್ರೀವನೆಂತಲೊ?

ಶೋಭನಾಂಗಿ! ತಾರೇ! ಬಿಡು ನನ್ನ ಬಟ್ಟೆಯನ್ನು ಬಿಡು ಕಾತರಾಕ್ಷಿ! ಏತಕ್ಕೆ ಈರೀತಿ ಮಾಡುವೆ? ರಣಮುಖದಲ್ಲಿ ಉರುಳಿಬಿದ್ದು ರಕ್ತವನ್ನು ಕಾರುತ್ತಾ ಸಡಿಲವಾದ ಮೈಬಿಗುಹುಳ್ಳ ಆ ಸುಗ್ರೀವನನ್ನು ನೀನೀಗ ನೋಡುವಿಯಂತೆ!

**ತಾರೆ.**—ಮಹಾರಾಜನೆ! ತಾಳ್ಮೆಯನ್ನು ವಹಿಸು. ಪ್ರಸನ್ನನಾಗು. ಸುಗ್ರೀವನು ಅಲ್ಪವಾದ ಕಾರಣದಿಂದ ಬಂದಿರಲಾರನು. ಆದರಿಂದ ಮಂತ್ರಿವರ್ಗದೊಂದಿಗೆ ಚನ್ನಾಗಿ ಯೋಚಿಸಿ ತೆರಳಬಹುದು.

**ವಾಲಿ.**—ಆಃ! ಎಲೌ ಶಶಿವದನೆ! ನನ್ನ ಹಗೆಗೆ ಇಂದ್ರನೇ ರಕ್ಷಕನಾಗಿರಲಿ! ಹರಿತವಾದ ಕೊಡಲಿಯನ್ನು ಧರಿಸಿದ ಪರಮೇಶ್ವರನೇ ಹಿಂಬಲವಾಗಿ ಬಂದಿರಬಾರದೇಕೆ? ಅರಳಿದ ಕೆಂದಾವರೆಯಂತೆ ಕಂಗೊಳಿಸುವ ಕಂಣ್ಣುಗಳಿಂದೊಪ್ಪುವ ವಿಷ್ಣುವೇ ಆಗಿದ್ದರೂ ನನ್ನನ್ನು ಇದಿರಿಸಿ ಹೊಡೆಯಲಾರನು.

**ತಾರೆ.**—ಮಹಾರಾಜನೆ! ಪ್ರಸನ್ನನಾಗು. ಸೈರಿಸು. ಮಹಾರಾಜನೆ! ಈ ಜನದ ವಿಷಯದಲ್ಲಿ ಅನುಗ್ರಹವನ್ನಿಟ್ಟು ಕಾಪಾಡಬೇಕು.

**ವಾಲಿ.**—ನನ್ನ ಪರಾಕ್ರಮವನ್ನು ಕೇಳು.

ತಾರೇ! ಹಿಂದೆ ಅಮೃತಮಥನಕಾಲದಲ್ಲಿ ನಾನಲ್ಲಿಗೆ ಹೋಗಿ ದೇವದಾನವರನ್ನು ಹೀಯಾಳಿಸಿ ಸರ್ಪರಾಜನ ಕಣ್ಣುಗುಡ್ಡೆಗಳು ಸಿಡಿಯುವ ರೀತಿಯಲ್ಲಿ ಕಡೆಯುತೊಡಗಿದ ನನ್ನನ್ನು ಕಂಡು ಅವರೆಲ್ಲರೂ ವಿಸ್ಮಿತರಾದರು.

**ತಾರೆ.**—ಮಹಾರಾಜನೆ! ಸೈರಿಸು. ಸೈರಿಸು.

**ವಾಲಿ**—(ಸಿಟ್ಟಿನಿಂದ) ಆಃ! ನನ್ನ ವಶವರ್ತಿನಿಯಾಗಿರು. ನಡೆ ನೀನು ಒಳಕ್ಕೆ.

**ತಾರೆ**—ಇದೋ ನಿರ್ಭಾಗ್ಯೆಯು ತೆರಳುವೆನು. (ಎಂದು ತೆರಳು ವಳು.)

**ವಾಲಿ**—ಭಲೆ! ತಾರೆಯು ಒಳಹೊಕ್ಕಳು. ನಾನಿನ್ನು ಸುಗ್ರೀವನ ನ್ನು ಭಗ್ನಗ್ರೀವನನ್ನು ಮಾಡುವೆನು (ದುರದುರನೆ ನಡೆತಂದು) ಸುಗ್ರೀ ವಾ! ನಿಲ್ಲು. ನಿಲ್ಲು.

ಇಂದ್ರನೇ ನಿನಗೆ ರಕ್ಷಕನಾಗಿರಲಿ. ಪ್ರಭುವಾದ ಮಧುಸೂದನನೇ ಆಗಿರಲಿ. ನನ್ನ ಕಣ್ಣಿಗೆಬಿದ್ದು ಜೀವದೊಂದಿಗೆ ಬೇರೆ ಹಿಂದಿರುಗಲಾರೆ. ಇತ್ತ. ಇತ್ತ.

**ಸುಗ್ರೀವ**—ಮಹಾರಾಜನ ಅಪ್ಪಣೆ. (ಎಂದಿಬ್ಬರೂ ಬಾಹುಯುದ್ಧ ಮಾಡುವರು.)

**ರಾಮ**—ಇವನು—ಈವಾಲಿಯು—ತುಟಿಯನ್ನು ಕಚ್ಚಿ ಕ್ರೋಧಾ ವೇಶದಿಂದ ಕಣ್ಣುಗಳನ್ನು ಕೆಂಪಡರಿಸಿ ಮುಷ್ಟಿಯನ್ನು ಬಿಗಿಹಿಡಿದು ಕೋರೆಗಳನ್ನು ಕಿರಿದು ಭಯಂಕರವಾಗಿ ಗರ್ಜಿಸುತ್ತ ಸುಡಲೆಳಸಿದ ಕಾಲಾಗ್ನಿಯೋ ಎಂಬಂತೆ ಯುದ್ಧದಲ್ಲಿ ಕಂಗೊಳಿಸುವನು.

**ಲಕ್ಷ್ಮಣ**—ಆರ್ಯನು ಇತ್ತ ಸುಗ್ರೀವನನ್ನು ನೋಡೋಣಾಗಲಿ.

ಅರಳಿದ ಕೆಂದಾವರೆಗಳಂತೆ ಕೆಂಪಡರಿದ ಕಣ್ಣುಗಳಿಂದೊಪ್ಪಿ ಚಿನ್ನ ದ ಬಾಹುಪುರಿಗಳಿಂದ ಬಿಗಿದ ತೋಳುಗಳುಳ್ಳವನಾಗಿ ವಾನರ ಭಾವದಿಂ ದ ಸದ್ವೃತ್ತವನ್ನು ತೊರೆದು ಹಿರಿಯುವನಾದ ಕಪಿರಾಜನನ್ನು ಇದಿರಿಸುತ್ತಿರು ವನು. ಹಾ! ವಾಲಿಯಿಂದ ಪೆಟ್ಟುತಿಂದ ಸುಗ್ರೀವನು ಬಿದ್ದನು.

**ಹನೂ.**—ಹಾ! ಹಾ! (ಬೇಗನೆ ರಾಮನ ಬಳಿಸಾರ್ದು) ಸ್ವಾಮಿ ಯು ಜಯಶೀಲನಾಗಿರಲಿ. ಇವನ ಅವಸ್ಥೆಯು ಈ ಬಗೆಯಾಗಿದೆ. ವಾ ನರೇಂದ್ರನು ಬಲಸಂಪನ್ನನು. ನನ್ನ ಒಡೆಯನಾದರೆ ದುರ್ಬಲನು. ಇ ವನ ಆವಸ್ಥೆಯನ್ನೂ ಪ್ರತಿಜ್ಞೆಯನ್ನೂ ಆರ್ಯನೇ ಯೋಚಿಸಬೇಕು.

**ರಾಮ**—ಹನುಮನ್! ಸಾಕು. ಸಾಕು. ಕಾತರನಾಗದಿರು. ಇ ದನ್ನೇ ಮಾಡುತ್ತಿರುವೆನು. (ಎಂದು ಬಾಣವನ್ನು ಬಿಟ್ಟು) ಭಲಾ! ವಾ ಲಿಯು ಬಿದ್ದನು.

**ಲಕ್ಷ್ಮಣ**—ಈವಾಲಿಯು—ರಕ್ತದಿಂದ ತೊಯ್ದು ಒಡಲಿನೆಲದ ಲೂ ಸಿಡಿದ ಕೆಂಪಾದ ಕಣ್ಣುಗುಡ್ಡೆಗಳಿಂದಲೂ ಕಠಿಣವೂ ವಿಶಾಲವೂ

ಆದ ತೆಗಲಿನಿಂದಲೂ ಕೂಡಿ ಯಮಲೋಕವನ್ನು ಹುಗಲೆಳಿಸಿ, ಬಾಣದ ಇರಿತದಿಂದ ಕುಗ್ಗಿದ ಬಲವುಳ್ಳ ದೇಹವನ್ನು ಧೈರ್ಯದಿಂದ ಸೆಳೆದುಕೊಂಡು ಬಹು ಪ್ರಯಾಸದಿಂದ ಬರುತ್ತಿರುವನು.

**ವಾಲಿ**—( ಪ್ರವೇಶಿಸಿ, ಮೋಹಗೊಂಡು, ಚೇತನವನ್ನು ಪಡೆದು, ಬಾಣದ ತುದಿಯಲ್ಲಿದ್ದ ಹೆಸರಿನ ಅಕ್ಷರಗಳನ್ನು ಓದಿ, ರಾಮನನ್ನು ಕುರಿತು) ಎಲೈ! ರಾಮನೆ! ರಾಜಧರ್ಮವನ್ನು ಕೈಕೊಂಡು ವೀರಸೂ ಧರ್ಮರಹಸ್ಯಗಳನ್ನು ನಿಸ್ಸಂಶಯವಾಗಿ ಅರಿತವನೂ ಲೋಕದ ಕಪಟತನವನ್ನು ಹೋಗಲಾಡಿಸಲೆಳಸದವನೂ ಎನಿಸಿದ ನೀನು ಯುದ್ಧದಲ್ಲಿ ಅಕ್ರಮದಿಂದ ಮೋಸಗೊಳಿಸುವುದಾವ ನ್ಯಾಯುವಯ್ಯಾ?

ಭಲಾ! ಅಯ್ಯಾ! ಸೌಮ್ಯಮೂರ್ತಿಯೂ ಯಶಸ್ಸಂಪನ್ನನೂ ಎನಿಸಿದ ನೀನು ನನ್ನನ್ನು ಮೋಸದಿಂದ ಹೊಡದೆಯಾಗಿ ಲೋಕದಲ್ಲೆಲ್ಲಾ ನಿನ್ನ ಅಪಯಶಸ್ಸು ಚೆನ್ನಾಗಿ ಬೇರೂರುವಂತೆ ಮಾಡಿದೆಯಲ್ಲಾ!

ರಾಘವಾ! ನಾರುಮುಡಿಗಳನ್ನು ಧರಿಸಿ ವೇಷವನ್ನು ಬದುಲಾಯಿಸಿದ ಮನೋವೃತ್ತಿಯುಳ್ಳ ನೀನು ತಮ್ಮನೊಂದಿಗೆ ಯುದ್ಧದಲ್ಲಿ ಆಸಕ್ತನಾಗಿದ್ದ ನನ್ನನ್ನು ಮರೆಮಾಚಿ ಕೊಲ್ಲುವುದು ಧರ್ಮವಿರುದ್ಧವಲ್ಲವೇ?

**ರಾಮ**—ಹೇಗೆ? ಪ್ರಚ್ಛನ್ನವಧವು ಧರ್ಮವಿರುದ್ಧವೆಂದು ಹೇಳುವೆಯಲ್ಲವೆ?

**ವಾಲಿ**—ಸಂದೇಹವೇನು?

**ರಾಮ**—ಹಾಗಲ್ಲವಲ್ಲಾ! ನೋಡು:—ಬಲೆಗಳಿಗೆ ಸಿಲುಕಿದ ಮೃಗಗಳನ್ನು ಕೊಲ್ಲುವುದು ಸಮ್ಮತವಷ್ಟೆ! ನೀನು ವಧ್ಯನೂ ಮೃಗಜಾತಿಗೆ ಸೇರಿದವನೂ ಆದುದರಿಂದ ನಿನ್ನನ್ನು ಗೂಢನಾಗಿ ದಂಡಿಸಿದೆನು.

**ವಾಲಿ**—ನೀನು ನನ್ನನ್ನು ದಂಡ್ಯನೆಂದು ತಿಳಿದಿರುವೆಯೊ?

**ರಾಮ**—ಸಂಶಯವೇನು?

**ವಾಲಿ**—ಯಾವಕಾರಣದಿಂದ?

**ರಾಮ**—ಅಗಮ್ಯಗಮನದಿಂದ.

**ವಾಲಿ**—ಅಗಮ್ಯಾಗಮನದಿಂದಲೊ? ನಮಗಿದು ಧರ್ಮವಷ್ಟೆ!

**ರಾಮ**—ಅಯ್ಯಾ! ಇದೀಗಯುಕ್ತವಾಗಿರುವುದು:—ಧರ್ಮಾರ್ಥಮರ್ಮಗಳನ್ನು ಅರಿತವನೂ ವಾನರಾಧಿಪನೂ ಎನಿಸಿದ ನೀನು—ನಿನ್ನನ್ನು ಮೃಗವೆಂತಲೇ ಬಗೆದು ಸೋದರನ ಮಡದಿಯನ್ನು ಸೋಕಬಹುದೆ!

ವಾಲಿ—ಸೋದರನಮಡದಿಯನ್ನು ಸೋಕಿದಕಾರಣ ಸಮಾನದೋಷಿಗಳಾದ ನಮ್ಮಿಬ್ಬರಲ್ಲಿ ನಾನು ಮಾತ್ರವೇ ಶಿಕ್ಷೆಗೆ ಗುರಿಯಾದೆನು. ಸುಗ್ರೀವನಲ್ಲವಷ್ಟೆ?

ರಾಮ—ನೀನು ದಂಡನೀಯನಾದಕಾರಣ ಶಿಕ್ಷೆಯನ್ನು ಹೊಂದಿದೆ. ದಂಡನೀಯರಲ್ಲದವರನ್ನು ಎಂದಿಗೂ ದಂಡಿಸುವುದೇ ಇಲ್ಲ.

ವಾಲಿ—ರಾಘವಾ! ಹಿರಿಯನಾದ ನನ್ನ ಮಡದಿಯನ್ನು ಸುಗ್ರೀವನು ಸೋಕಿದ ಕಾರಣ ನಾನು ಅವನ ಮಡದಿಯನ್ನು ಅಭಿಮರ್ಶನ ಮಾಡಿದಮಾತ್ರದಿಂದಲೇ ನಾನುಮಾತ್ರ ಹೇಗೆ ದಂಡನಿಯನು?

ರಾಮ—ಹಿರಿಯವನು ಕಿರಿಯವನ ಸತಿಯನ್ನು ಸೋಕುವುದು ಎಂದಿಗೂ ಇಲ್ಲವಷ್ಟೆ!

ವಾಲಿ—ಆಹಾ! ನನ್ನ ಬಾಯಿ ಕಟ್ಟಿತು. ನಿನ್ನಿಂದ ದಂಡಿತನಾದೆನಾಗಿ ನನ್ನ ಪಾಪವು ತೊಲಗಿತಲ್ಲವೆ!

ರಾಮ—ಹಾಗೆಯೇ ಆಗಲಿ.

ಸುಗ್ರೀವ—(ವಾಲಿಯನ್ನುಕಂಡು ಶೋಕದಿಂದ) ಛೀ! ಛೀ! ಗಜೇಂದ್ರಗಮನಾ! ಹರಿವರಾ! ಆನೆಯ ಸೊಂಡಿಲೆಯಂತೆ ಕಂಗೊಳಿಸುತ್ತ ಹಗೆಯ ಬಾಣದಿಂದ ಗಾಯಪಟ್ಟ ಬಾಹುಪುರಿಗಳುಳ್ಳ ನಿನ್ನ ತೋಳುಗಳು ನೆಲದಮೇಲೆ ಬಿದ್ದಿರುವುದನ್ನು ಕಂಡು ನನ್ನ ಅಂತರಂಗವು ಕುಸಿದು ಬೀಳುವಂತಿದೆ. ಹಾ! ಹಾ!

ವಾಲಿ—ಸುಗ್ರೀವಾ! ಸಾಕು. ಚಿಂತಿಸದಿರು. ಲೋಕದ ಧರ್ಮವೇ ಈ ತೆರನಾದುದು.

(ತೆರೆಯಲ್ಲಿ)

ಹಾ! ಹಾ! ಮಹಾರಾಜನು—

ವಾಲಿ—ಸುಗ್ರೀವಾ! ಸ್ತ್ರೀಜನವನ್ನು ಅಡ್ಡಗಿಸು. ಅಡ್ಡಗಿಸು. ಈರೀತಿಯಲ್ಲಿರುವ ನನ್ನನ್ನು ನೋಡಬಾರದು.

ಸುಗ್ರೀವ—ಮಹಾರಾಜನ ಅಪ್ಪಣೆ. ಹನೂಮಂತನೆ! ಈ ರೀತಿ ಮಾಡು.

ಹನೂ.—ಕುಮಾರನ ಅಪ್ಪಣೆ (ಎಂದು ತೆರಳುವನು)

(ಬಳಿಕ ಅಂಗದ ಹನೂಮಂತರ ಪ್ರವೇಶ.)

ಹನೂ.—ಅಙ್ಗದಾ! ಇತ್ತ. ಇತ್ತ.

**ಅಂಗದ**— ಋಷಹರಿಕುಲಾಧಿಪನು ಕಾಲವಶವನ್ನೈದಿದ ಸಮಾಚಾರವನ್ನು ಕೇಳಿ, ಸಡಿಲವಾದ ವ್ಯೈಬಿಗುವುಳ್ಳ ನಾನು ಮುಂದೆ ಕವಿದ ದುಃಖಭರವುಳ್ಳವನಾಗಿ ನಡೆಯುತ್ತಿರುವೆನು. ಹನೂಮನ್! ಮಹಾರಾಜನೆಲ್ಲಿ?

**ಹನೂ.**— ಇದೋ ಮಹಾರಾಜನು— ಬಾಣದಿಂದ ಬಿರಿದ ಎದೆಯುಳ್ಳವನಾಗಿ ಗುಹನ ಶಕ್ತ್ಯಾಯುಧದಿಂದ ಉರುಳಿಬಿದ್ದ ಕ್ರೌಂಚಪರ್ವತದಂತೆ ನೆಲದಮೇಲೆ ಕಂಗೊಳಿಸುತ್ತಿರುವನು.

**ಅಂಗದ**—( ಬಳಿಸಾರ್ದು ) ಹಾ! ಮಹಾರಾಜನೆ! ಅತಿಬಲನೇ! ಮೊದಲು ಸುಖದಿಂದ ಪವಳಿಸುತ್ತಿದ್ದ ಹರೀಶ್ವರನಾದ ನೀನು ಅಂಗಚೇಷ್ಟಾಶೂನ್ಯನಾಗಿ ನೆಲದಮೇಲೆ ಬಿದ್ದಿರುವೆಯಲ್ಲಾ! ಬಾಣದಿಂದ ಜರ್ಜರಿತವಾದ ಈ ದೇಹವನ್ನುಬಿಟ್ಟು ವೀರಸ್ವರ್ಗವನ್ನು ತೆರಳಬಯಸಿರುವೆಯಾ? ( ಎಂದು ಉರುಳಿ ಬೀಳುವನು. )

**ವಾಲಿ**—ಅಂಗದಾ! ಸಾಕು. ಶೋಕಿಸಬೇಡ. ಲೋಕದ ನಡೆವಳಿಯೇ ಈ ಬಗೆಯಾದುದು. ಎಲೈ! ಸುಗ್ರೀವಾ! ನನ್ನ ತಪ್ಪಿತವನ್ನು ಮರೆತು ಕಪಿರಾಜ್ಯವನ್ನು ಕೈಕೊಂಡು ವಿವೇಕಶಾಲಿ ಎನಿಸಿ ರೋಷವನ್ನು ದೂರಮಾಡಿ ಧರ್ಮಮಾರ್ಗವನ್ನು ಕೈಕೊಂಡು ನನ್ನವಂಶದ ಈ ಮೊಳಕೆಯನ್ನು ಸ್ವೀಕರಿಸು.

**ಸುಗ್ರೀವ**— ಮಹಾರಾಜನ ಅಪ್ಪಣೆ.

**ವಾಲಿ**—ರಾಘವಾ! ಇವರಿಬ್ಬರೂ ಕಪಿಗಳಾದುದರಿಂದ ಯಾವ ಬಗೆಯಾದ ಅಪರಾಧ ಮಾಡಿದಾಗ್ಯೂ ಇವರ ಚಾಪಲವನ್ನು ನೀನು ಮನ್ನಿಸಬಹುದಲ್ಲವೆ!

**ರಾಮ**— ಒಳ್ಳೆಯದು.

**ವಾಲಿ**—ಸುಗ್ರೀವಾ! ನಮ್ಮ ಕುಲಧನವಾದ ಈ ಹೇಮಮಾಲೆಯನ್ನು ಸ್ವೀಕರಿಸು.

**ಸುಗ್ರೀವ**—ಅನುಗ್ರಹೀತನಾದೆನು. ( ಎಂದು ತೆಗೆದುಕೊಳ್ಳುವನು)

**ವಾಲಿ**— ಹನೂಮನ್! ಎಲ್ಲಿ? ಉದಕವೆಲ್ಲಿ?

**ಹನೂ.**—ಮಹಾರಾಜನ ಅಪ್ಪಣೆ ( ಎಂದು ಹೊರಬಂದು ಮರಳಿ ಹೊಕ್ಕು) ಇದೋ ಉದಕವು.

**ವಾಲಿ**—( ಆಚಮನಮಾಡಿ ) ಪ್ರಾಣಗಳಿನ್ನು ಬಿಟ್ಟು ಹೋಗುವಂತಿವೆ. ಇಗೋ ಗಂಗೆಯೇ ಮುಂತಾದ ಮಹಾನದಿಗಳೂ, ಊರ್ವಶಿಯೇ

ಮೊದಲಾದ ಅಪ್ಸರ ಸ್ತ್ರೀಯರೂ ನನ್ನ ಸುತ್ತಲೂ ಬಂದಿರುವರು. ಸಹಸ್ರ ಹಂಸಯುಕ್ತವೆನಿಸಿ ವೀರರನ್ನು ಕರೆದುಯ್ಯುವ ವಿಮಾನವು ಕಾಲನ ಅಪ್ಪಣೆಯಂತೆ ನನ್ನ ಸಲುವಾಗಿ ಬಂದಿರುವುದು. ಇರಲಿ. ಬಂದೆನು. ಬಂದೆನು. (ಸ್ವರ್ಗಕ್ಕೆ ತೆರಳುವನು.)

**ಎಲ್ಲರೂ**—ಹಾ! ಹಾ! ಮಹಾರಾಜನು.

**ರಾಮ**—ಭಲಾ! ವಾಲಿಯು ಸ್ವರ್ಗಕ್ಕೆ ತೆರಳಿದನು. ಸುಗ್ರೀವಾ! ಇವನ ಸಂಸ್ಕಾರವನ್ನು ನಡೆಯಿಸು.

**ಸುಗ್ರೀವ**—ದೇವರ ಆಜ್ಞೆ.

**ರಾಮ**—ಲಕ್ಷ್ಮಣಾ! ಸುಗ್ರೀವನ ಅಭಿಷೇಕಕ್ಕೆ ಸಜ್ಜುಗೊಳಿಸು.

**ಲಕ್ಷ್ಮಣ**—ಆರ್ಯನ ಅಪ್ಪಣೆ.

(ಎಂದೆಲ್ಲರೂ ತೆರಳುವರು.)

---

## ಎರಡನೆಯ ಅಂಕ.

(ಕಕುಭನ ಪ್ರವೇಶ)

**ಕಕುಭ**—ಕಾರ್ಯವೆಲ್ಲವೂ ಒಂದು ಬಗೆಯಿಂದ ನೆರವೇರಿದಂತಾಗಿರುವುದರಿಂದ ವಾನರಸೇನಾನಾಯಕರೆಲ್ಲರೂ ಆಹಾರಕಾರ್ಯದಲ್ಲಿ ವ್ಯಾಪಾರಗೊಂಡಿರುವರು. ಆದುದರಿಂದ ನಾನೂ ಸ್ವಲ್ಪ ಆಹಾರವನ್ನು ಸೇವಿಸುವೆನು. (ಅಂತೆಯೇ ಮಾಡುವನು.)

**ಬಿಲಮುಖ**—(ಪ್ರವೇಶಿಸಿ) ಮಹಾರಾಜನಾದ ಸುಗ್ರೀವನು ಈರೀತಿ ಆಜ್ಞಾಪಿಸಿರುವನು:—"ಆರ್ಯರಾಮನ ಉಪಕಾರಕ್ಕೆ ಪ್ರತ್ಯುಪಕಾರ ನಿಮಿತ್ತವಾಗಿ ಸಕಲದಿಕ್ಕುಗಳಿಗೂ ಸೀತೆಯನ್ನು ಹುಡುಕುವ ಸಲುವಾಗಿ ಕಳುಹಿಸಿದ್ದ ವಾನರರೆಲ್ಲರೂ ಹಿಂದಿರುಗಿ ಬಂದರು. ಅವರಲ್ಲಿ ದಕ್ಷಿಣದಿಕ್ಕಿಗೆ ಹೊರಟ ಅಂಗದ ಕುಮಾರನ ವೃತ್ತಾಂತವನ್ನು ತಿಳಿದು ಬೇಗ ಬಾ" ಎಂದು. ಆದರೆ ಕುಮಾರನು ಎಲ್ಲಿ ಹೋಗಿರಬಹುದು? ಓಹೋ ಇವನು ಆರ್ಯ ಕಕುಭನು. ಇರಲಿ. ಇವನನ್ನೇ ಕೇಳಿನೋಡುವೆನು. ಆರ್ಯನಿಗೆ ಸೌಖ್ಯವಷ್ಟೆ?

**ಕಕುಭ**—ಓಹೋ! ಬಿಲಮುಖನು. ನೀನೆಲ್ಲಿಂದ?

**ಬಿಲಮುಖ**—ಆರ್ಯಾ! ಮಹಾರಾಜನ ಅಣತಿಯಂತೆ ಅಂಗದ ಕುಮಾರನನ್ನು ನೋಡಬಂದಿರುವೆನು.

ಕಕುಭ—ಆರ್ಯರಾಮನೂ ಮಹಾರಾಜನೂ ಕುಶಲದಿಂದಿರುವರಷ್ಟೆ?

ಬಿಲ.—ಹೌದು.

ಕಕುಭ—ಮಹಾರಾಜನ ಅಭಿಪ್ರಾಯವಾದರೂ ಏನು ?

ಬಿಲ—ಮಹಾರಾಜನಾದ ಸುಗ್ರೀವನು— — ( ಮೊದಲಿನಂತೆಯೇ ಹೇಳುವನು. )

ಕಕುಭ—ಕೆಲಸದಲ್ಲಿ ಅರ್ಧವು ನೆರವೇರಿತೆಂದು ಅರಿಯೆಯಾ ?

ಬಿಲ—ಏನು ? ಏನು ?

ಕಕುಭ—ಕೇಳು :—ಪಕ್ಷಿರಾಜನ ( ಸಂಪಾತಿಯ ) ಮೂಲಕ ರಾಮನ ಅರಸಿಯ ಸಮಾಚಾರವನ್ನು ತಿಳಿದು , ಆನೆಗಳ ಹಿಂಡಿನಿಂದ ಕೂಡಿದ ಮಹೇಂದ್ರಾಚಲವನ್ನೇರಿ, ಲಂಕೆಗೆ ಹೋಗುವಸಲುವಾಗಿ ವಾಯುಪುತ್ರನು ಇಂದು ಕಡಲನ್ನು ದಾಟಿದನು. ಅದರಿಂದ ಬಾ, ನಾವಿಬ್ಬರೂ ಕುಮಾರನ ಪಾದಮೂಲವನ್ನೇ ಸೇರುವ. ( ಎಂದಿಬ್ಬರೂ ತೆರಳುವರು. )

( ಇಂತಿದು ವಿಷ್ಕಂಭಕವು. )

---

( ರಕ್ಕಸಿಯರಿಂದ ಪರಿವೃತೆಯಾದ ಸೀತೆಯ ಪ್ರವೇಶ )

ಸೀತೆ—ಹಾ! ಛೀ! ಛೀ! ಮಂದಭಾಗಿನಿಯಾದ ನಾನು ಅತಿಥೀರೆಯಾಗಿರುವೆನಲ್ಲಾ! ಆರ್ಯನನ್ನು ಅಗಲಿ ರಾಕ್ಷಸರಾಜನ ಭವನಕ್ಕೆ ಕರೆತಂದು, ಅನಿಷ್ಟಗಳೂ ಅನರ್ಹಗಳೂ ಆದ ಸ್ವೇಚ್ಛಾಲಾಪಗಳನ್ನು ಕೇಳುತ್ತ ನಿರ್ಭಾಗ್ಯೆಯಾದ ನಾನಿನ್ನೂ ಬದುಕಿರುವೆನಲ್ಲಾ ! ಅಥವಾ ಆರ್ಯಪುತ್ರನ ಬಾಣದ ನಂಬುಗೆಯಿಂದ ಹೇಗಾದರೂ ಜೀವವನ್ನು ನಿಲ್ಲಿಸಿಕೊಂಡಿರುವೆನು. ಧಗಧಗಿಸುತ್ತಿರುವ ಕುಲಿಮೆಯ ಉರಿಯಲ್ಲಿ ನೀರೆರಚಿದಂತೆ ನನ್ನ ಅಂತರಂಗಕ್ಕೆ ಯಾವುದೋ ಒಂದು ಬಗೆಯಾದ ಚಿತ್ತಪ್ರಸಾದವು ಉಂಟಾಗಿರುವುದು ! ಆಹಾ! ಇದೇನಿರಬಹುದು? ನನ್ನವಿಷಯದಲ್ಲಿ ಆರ್ಯಪುತ್ರನೇನಾದರೂ ಪ್ರಸನ್ನಹೃದಯನಾಗಿರಬಹುದೆ?

( ಕಯ್ಯಲ್ಲಿ ಅಂಗುಲೀಯಕವನ್ನು ತಳೆದ ಹನೂಮಂತನ ಪ್ರವೇಶ )

ಹನೂಮಂತ—( ಲಂಕೆಯನ್ನು ಹೊಕ್ಕು ) ಆಹಾ! ರಾವಣನ ಭವನದ ಸೊಬಗು ಆಶ್ಚರ್ಯಕರವಾಗಿರುವುದು !

ಚಿನ್ನದ ತೋರಣಗಳಿಂದ ತುಂಬಿ ಉತ್ತಮ ಮಣಿಗಳಿಂದಲೂ ಹವಳಗಳಿಂದಲೂ ಸಿಂಗರಿಸಲ್ಪಟ್ಟು ನಿರ್ಮಲವಾದ ವಿಮಾನಪಙ್ಕ್ತಿಗಳಿಂ

ಧೊಟ್ಟಿದ ಈ ಲಂಕಾನಗರವು ಅಮರಾವತಿಯಂತೆ ಅಂತರಿಕ್ಷದಲ್ಲಿ ಕಂಗೊಳಿಸುತ್ತಿರುವುದು.

(ಮತ್ತೊಂದು ಕಡೆ ನೋಡಿ) ಆಹಾ! ದಶಗ್ರೀವನು ಇಂತಹ ಸರ್ವೋತ್ತಮವಾದ ರಾಜಲಕ್ಷ್ಮಿಯನ್ನು ಪಡೆದಿದ್ದರೂ ದುರ್ಮಾರ್ಗದಲ್ಲಿ ಕಾಲೂರಿರುವನಾಗಿ ಎಲ್ಲವನ್ನೂ ಹಾಳುಮಾಡತೊಡಗಿರುವನಲ್ಲಾ! (ಎಂದು ಸುತ್ತಲೂನಡೆತಂದು) ಲಂಕೆಯನ್ನೆಲ್ಲಾ ನಡೆದು ನೋಡಿದಂತಾಯಿತು.

ಒಳಮನೆ, ನಡುಮನೆ, ಪಡಸಾಲೆ, ವಿಮಾನಗಳು, ಸ್ನಾನಶಾಲೆ, ಅಂತಃಪುರ, ಉಪ್ಪರಿಗೆ, ಬಿಸಿಲುಮುಹಡಿ, ಅರವಟಿಗೆ, ಮಲಗುವ ಮನೆಗಳನ್ನೆಲ್ಲಾ ಹೊಕ್ಕು ಚನ್ನಾಗಿ ಹುಡುಕಿ ನೋಡಿದೆನು. ಎಲ್ಲವನ್ನೂ ಹುಡುಕಿದಂತೆಯೇ ಆಯಿತು. ರಾಣಿಯು ಮಾತ್ರ ನನ್ನ ಕಣ್ಣಿಗೆ ಬೀಳಲಿಲ್ಲ.

ಛೀ! ಛೀ! ನನ್ನ ಪ್ರಯತ್ನವೆಲ್ಲಾ ವ್ಯರ್ಥವಾಯಿತು. ಇರಲಿ. ಈ ಉಪ್ಪರಿಗೆಯ ತುದಿಯನ್ನೇರಿ ನೋಡುವೆನು. (ಹಾಗೆಮಾಡಿ) ಎಲಾ! ಇದು ಪ್ರಮದವನ ರಾಶಿಯು. ಇದನ್ನು ಹೊಕ್ಕು ಹುಡುಕಿ ನೋಡುವೆನು. (ಪ್ರವೇಶಿಸಿ ಸುತ್ತಲೂ ನೋಡಿ) ಈ ಪ್ರಮದವನ ಸಂಪತ್ತು ಎಷ್ಟೆಂದು ಬಣ್ಣಿಸತೀರದು. ಇಲ್ಲಿ—

ಚಿನ್ನ ಹವಳ ಪಚ್ಚೆಗಳಿಂದ ಪಾತಿಗಳನ್ನು ಕಟ್ಟಿ, ಅಲ್ಲಲ್ಲಿ ಪುಟ್ಟಪುಟ್ಟ ಬೆಟ್ಟಗಳನ್ನು ಕಲ್ಪಿಸಿ, ಮನೋಹರವಾದ ಈ ಉದ್ಯಾನವು ಅಂತರಿಕ್ಷದಲ್ಲಿ ದೇವೇಂದ್ರನ ಕ್ರೀಡಾವನದಂತಿರುವುದು.

ನಾನಾಬಗೆಯಾದ ಧಾತುರಸವನ್ನು ಒಸರುತ್ತಿರುವ ಮನೋಹರವಾದ ಬೆಟ್ಟಗಳ ಸಾಲನ್ನು ಕಂಡೆನು. ತೆರತೆರನಾದ ಜಲಚರ ಪಕ್ಷಿಗಳಿಂದ ಪಟ್ಟವಾದ ಕೊಳಗಳನ್ನು ನೋಡಿದೆನು. ಅನುದಿನವೂ ಫಲಪುಷ್ಪಗಳಿಂದ ಬಾಗಿದ ಮರಗಳುಳ್ಳ ತೋಪುಗಳನ್ನೂ ನಿರುಕಿಸಿದೆನು. ರಾವಣನ ಮನೆಯಲ್ಲಿ ಎಲ್ಲವನ್ನೂ ಕಂಡೆನು. ಸೀತೆಯನ್ನು ಮಾತ್ರ ಕಾಣಲಿಲ್ಲ.

ಈ ಪ್ರದೇಶದಲ್ಲಿ ಯಾವುದೋ ಬೆಳಗುವಂತಿದೆ! ಅಲ್ಲಿನೋಡುವೆನು. (ನಡೆತಂದು ನೋಡಿ) ಆಹಾ! ಈಕೆಯು ಯಾರು? ವಿಕಾರರೂಪವುಳ್ಳ ರಕ್ಕಸಿಯರಿಂದ ಪರಿವೃತೆಯಾದ ಈ ಸುಮಧ್ಯಮೆಯು ಕಾರ್ಮುಗಿಲಿನ ನಡುವೆ ಮಿಂಚಿನ ಬಳ್ಳಿಯಂತೆ ಕಂಗೊಳಿಸುತ್ತಿರುವಳು.

ಈಕೆಯು ಕೃಷ್ಣಸರ್ಪವನ್ನು ಹೋಲುವ ಏಕವೇಣಿಯನ್ನು ಧರಿಸಿ, ಹಿಡಿಯಿಂದ ಅಳೆಯಬಹುದಾದ ಸೊಂಟದಿಂದೊಪ್ಪಿ, ಕಾಂತಿಹಲ್ಲಿ ಕಟ್ಟ

ಮನೋವೃತ್ತಿಯಿಂದಲೂ ಉಪವಾಸಕೃಶವಾದ ದೇಹದಿಂದಲೂ ಬಾಷ್ಪ ಕಲುಷಿತವಾದ ಮೋರೆಯಿಂದಲೂ, ಬಿಸಿಲಿನಲ್ಲಿ ಕಂದಿದ ಕಮಲಮಾಲಿಯಂತಿರುವಳು.

ಆಹಾ! ಇದೇನು! ದೀಪದಬೆಳಕು! ( ನೋಡಿ ) ಓಹೋ! ರಾವಣನು.

ರತ್ನಮಯ ಕಿರೀಟ, ಅಗಲವಾದ ಕೆಂಗಣ್ಣು, ಮದಯುಕ್ತವಾದ ಮಂದಗಮನ, ಮದ್ದಾನೆಯ ಲೀಲೆಗಳಿಂದೊಪ್ಪುವ ಈ ರಾಕ್ಷಸೇಶ್ವರನು ಹುಲ್ಲೆಗಳ ನಡುವೆ ನಡೆದು ಬರುವ ಸಿಂಹದಂತಿರುವನು.

ಈಗನಾನೇನು ಮಾಡಲಿ? ಇರಲಿ. ತಿಳಿಯಿತು. ಈ ಅಶೋಕ ಮರವನ್ನೇರಿ ಪೊಟರೆಯಲ್ಲಿ ಕುಳಿತು ಸಮಾಚಾರವನ್ನೆಲ್ಲಾ ಚೆನ್ನಾಗಿ ತಿಳಿಯುವೆನು. ( ಅಂತೆಯೇ ಮಾಡುವನು. )

( ಪರಿವಾರದೊಡನೆ ರಾವಣನ ಪ್ರವೇಶ )

ರಾವಣ—ಅವಿವೇಕಿನಿಯಾದ ಆ ಮೊದ್ದು ಸೀತೆಯು ಕ್ಷುದ್ರನಾದ ಆ ತಾಪಸಕ್ಷತ್ರಿಯನಲ್ಲಿ ಮನೋವೃತ್ತಿಯನ್ನಿರಿಸಿ, ಯುದ್ಧದಲ್ಲಿ ಕ್ರುದ್ಧವಾದ ಐರಾವತ ದಂತದ ಇರಿತದಿಂದಲೂ ವಜ್ರಾಯುಧದ ಪೆಟ್ಟುಗಳಿಂದಲೂ ಜಿಡ್ಡುಗಟ್ಟಿದ ಎದೆಯಿಂದೊಪ್ಪಿ ದಿವ್ಯಾಸ್ತ್ರಗಳಿಂದ ಸುರದೈತ್ಯದಾನವಚಮೂವಿದ್ರಾವಣನೆನಿಸಿದ ರಾವಣನಾದ ನನ್ನನ್ನೂ ಮೋಹಿಸದಿರುವಳಲ್ಲಾ! ಆಹಾ! ಇದು ದಿಟವಾಗಿಯೂ ದೈವದ ವಿಘ್ನವೇ ಸರಿ.

( ಮೇಲೆ ನೋಡಿ ) ಇವನು—ಈ ಚಂದ್ರನು—

ಕುಮುದವನ ಬಾಂಧವನೆನಿಸಿದ ಈ ಶಶಾಂಕನು ಬೆಳ್ಳಿಯ ಕನ್ನಡಿಯಂತೆ ಜಗಿಯುತ್ತ ಕಿರಣರಾಶಿಯಿಂದ ನನ್ನ ಅಂತರಂಗವನ್ನು ವ್ಯಥೆಗೊಳಿಸಿ ಅಂತರಿಕ್ಷದಲ್ಲಿ ವಿಜೃಂಭಣೆಯಿಂದ ಮೆರೆಯುತ್ತಿರುವನು.

( ನಡೆತಂದು ) ಈ ಸೀತೆಯು ಮರದಬುಡವನ್ನು ಸೇರಿ, ಧ್ಯಾನಾಸಕ್ತಚಿತ್ತೆ ಎನಿಸಿ ಉಪವಾಸದಿಂದ ಕಂದಿದ ಮೋರೆಯನ್ನು ತಳೆದು ತನ್ನದೇಹದಲ್ಲಿಯೇ ಅಡಗಿಹೋಗುತ್ತಿರುವಳೋ ಎಂಬಂತೆ ಗೂಢವಾದ ವಕ್ಷಸ್ಥಳದಿಂದ ಕೂಡಿ, ರಾಕ್ಷಸಿಯರಿಂದ ಪರಿವೃತೆಯಾಗಿ ಸೋನೆಮಳೆಗರೆವ ಮೋಡದ ನಡುವೆ ಚಂದ್ರಲೇಖೆಯಂತೆ ಕುಳಿತಿರುವಳು.

ಭೋಗಗಳನ್ನೂ ನನ್ನನ್ನೂ ಅಪಾರವಾದ ಈ ಸಂಪತ್ತನ್ನೂ ತಿರಸ್ಕರಿಸಿ ಮನುಷ್ಯನಲ್ಲಿ ನಟ್ಟ ಚಿತ್ತವೃತ್ತಿಯಿಂದ ವಶವರ್ತಿನಿಯೇ ಆಗದಿರುವಳಲ್ಲಾ!

ಹನೂ—ಭಲಾ! ಚೆನ್ನಾಗಿ ವ್ಯಕ್ತವಾಯಿತು. ಈಕೆಯೇ ಮಿಥಿಲ ರಾಜನಂದಿನಿಯು. ರಾಮನ ಮಡದಿ. ಸಿಂಹವನ್ನು ಕಂಡು ತತ್ತರಗೊಂಡ ಹುಲ್ಲೆಯಂತೆ ಶಪಿಸುತ್ತಿರುವಳು.

ರಾವಣ—( ಬಳಿಸಾರ್ದು ) ಸೀತೆ! ಉಗ್ರವಾದ ಈ ವ್ರತವನ್ನು ಬಿಡು. ಎಲೌ ಭಾಮಿನಿ! ಸರ್ವಾವಯವಗಳಿಂದಲೂ ನನ್ನನ್ನು ಸೇರು.

ಭದ್ರೆ! ಗತಾಯುಷನೂ ಕಾಮತಂತ್ರವಿಮುಖನೂ ಎನಿಸಿದ ಆ ಮನುಷ್ಯನನ್ನು ಈಗಲೇ ಬಿಟ್ಟುಬಿಡು.

ಸೀತೆ—ಛೀ! ಛೀ! ಈ ರಾವಣಬಾಳು ನಗೆಗೇಡು. ವಾಕ್ಸಿದ್ಧಿಯನ್ನು ಕೂಡ ತಿಳಿಯದಿರುವನಲ್ಲಾ!

ಹನೂ—(ಸಿಟ್ಟಿನಿಂದ) ಆಹಾ! ಈ ರಾವಣನ ಕೆಚ್ಚು ಎಷ್ಟರ ಮಟ್ಟಿನದು? ಕ್ಷೀಣಾಯುಷ್ಯನಾದ ಈ ರಾವಣನು—ರಾಮನ ಆತೋಳುಗಳನ್ನೂ—ಆ ದೊಡ್ಡ ಬಿಲ್ಲನ್ನೂ—ಆ ಬಾಣವನ್ನೂ ತಿಳಿಯದೆ ಇಂತು ಒದರುತ್ತಿರುವನು.

ರೋಷವನ್ನು ತಡೆಯಲಾರೆನು. ಆಗಲಿ. ನಾನೇ ಆರ್ಯ ರಾಮನ ಕಾರ್ಯವನ್ನು ಸಾಧಿಸುವೆನು. ಅಥವಾ ನಾನು ರಾವಣನನ್ನು ಕೊಂದರೆ ಕಾರ್ಯವೇನೋ ಕೈಗೂಡುವದು ದಿಟ. ಒಂದುವೇಳೆ ರಾಕ್ಷಸನೇ ನನ್ನನ್ನು ಸಂಹರಿಸಿದರೆ ದೊಡ್ಡಕಾರ್ಯವು ಧ್ವಂಸವಾಗುವದು.

ರಾವಣ—ವರತನು! ತನುಗಾತ್ರಿ! ಚಾರುನೇತ್ರಿ! ದೇವಿ! ಕುವಲಯಮಾಲೆಯನ್ನು ಹೋಲುವ ನಿನ್ನ ಜಡೆಯನ್ನು ಬಿಚ್ಚು. ಬಗೆಬಗೆಯಾದ ರತ್ನರಾಶಿಯಿಂದ ಭೂಷಿತಾಂಗನಾದ ಈ ದಶಶಿರನನ್ನು ಮನಃಪೂರ್ವಕವಾಗಿ ಸೇರು.

ಸೀತೆ—ಛೀ! ಛೀ! ಈ ನೀಚರಾಕ್ಷಸನು ಇನ್ನೂ ಬದುಕಿರುವನಲ್ಲಾ! ಧರ್ಮವೇ ವ್ಯತ್ಯಸ್ತವಾದಂತಿರುವುದು.

ರಾವಣ—ಎಲೌ ದೇವಿ!

ಸೀತೆ—( ಶಪ್ತನಾಗಿರುವೆ ) ಹಾಳಾಗು.

ರಾವಣ—ಹಾ! ಹಾ!! ಹಾ!!! ಆಹಾ! ಈ ಪತಿವ್ರತೆಯ ತೇಜಸ್ಸು ಅತ್ಯದ್ಭುತವಾದುದು.

ಇಂದ್ರಾದಿ ದೇವತೆಗಳೂ, ದಾನವರೂ ನನ್ನಿಂದ ಭಂಗವನ್ನು ಪಡೆದಿರುವರು. ಅಂತಹ ನಾನು ಈಗ ಸೀತೆಯ ಮೂರು ಅಕ್ಷರಗಳಿಂದ ನೋಹಗೊಂಡೆನಲ್ಲಾ!

( ತೆರೆಯಲ್ಲಿ )

ದೇವಾ ! ಪರಾಕು. ಲಂಕೇಶ್ವರಾ ! ಸ್ವಾಮಿನ್ ! ಮಹಾರಾಜಾ ! ಹತ್ತು ಗಳಿಗೆಗಳಾದವು. ಸ್ನಾನವೇಳೆಯು ಮೀರುತ್ತಿರುವುದು. ಮಹಾ ರಾಜನು ಇತ್ತ. ಇತ್ತ.

( ಪರಿವಾರದೊಡನೆ ರಾವಣನು ತೆರಳುವನು. )

**ಹನೂ**—ಭಲೆ ! ರಾವಣನು ತೊಲಗಿದನು. ರಕ್ಕಸಿಯರೆಲ್ಲರೂ ಒರಗಿದರು. ದೇವಿಯನ್ನು ಸೇವಿಸಲು ಇದೇಸಮಯವು. ( ಪೊಟರೆ ಯಿಂದ ಇಳಿದು ) ಸುಮಂಗಳಿಯೆ ! ಮಂಗಳವಾಗಲಿ.

ನಿನ್ನ ಸ್ನೇಹಸಂತಾಪದಿಂದ ಕ್ಲಾಂತಚಿತ್ತನೂ ಸರ್ವಜ್ಞನೂ ರಾಜಾ ಧಿರಾಜನೂ ಆದ ರಾಮನು ನನ್ನನ್ನು ಕಳುಹಿಸಿರುವನು.

**ಸೀತೆ**—( ಸ್ವಗತಂ ) ಇವನಾರು ? ನೀಚರಾಕ್ಷಸನೇನಾದರೂ ಆರ್ಯ ಪುತ್ರನ ಸಂಬಂಧಿಯೆಂದು ನೆಪಮಾಡಿಕೊಂಡು ಕಪಿರೂಪದಿಂದ ನನ್ನನ್ನು ಮೋಸಗೊಳಿಸಬೇಕೆಂದಿರಬಹುದೆ ? ಇರಲಿ. ಸುಮ್ಮನಿರುವೆನು.

**ಹನೂ**—ಇದೇನು ಆರ್ಯೆಯು ನಂಬದಿರುವಳು ! ದೇವಿ ! ಅನ್ಯನೆಂ ಬ ಶಂಕೆಯನ್ನು ಬಿಡು. ಆರ್ಯೆಯು ಲಾಲಿಸ ಬೇಡುವೆನು.

ಇಕ್ಷ್ವಾಕು ಕುಲ ದೀಪನೊಂದಿಗೆ ಸಂಧಿಸಿ ಸ್ನೇಹಬಳೆಯಿಸಿದ ಸು ಗ್ರೀವನು ನಿನ್ನನ್ನು ಹುಡುಕುವ ಸಲುವಾಗಿ ನನ್ನನ್ನು ಕಳುಹಿರುವನು. ನನ್ನ ಹೆಸರು ಹನೂಮಂತ.

**ಸೀತೆ**—ಯಾವನೋ ಒಬ್ಬನಾಗಿರಕೂಡದೇಕೆ ? ಆರ್ಯಪುತ್ರನ ನಾ ಮಸಂಕೀರ್ತನ ಮಾಡುತ್ತಿರುವ ಇವನೊಂದಿಗೆ ಮಾತನಾಡುವೆನು ಭ ದ್ರ ! ಆರ್ಯಪುತ್ರನ ಸಮಾಚಾರವೇನು ?

**ಹನೂ**—ದೇವಿ ! ಲಾಲಿಸು. ನಿನ್ನ ಸದ್ಗುಣಚಿಂತೆಯಿಂದ ಲಾವ ಣ್ಯಲೀಲಾ ಶೂನ್ಯವೆನಿಸಿ ಅನಶನವ್ರತದಿಂದ ಬಾಡಿ ಬಿಳುಪೇರಿ ಕಂ ಬನಿಯಿಂದ ಮಾಸಿದ ಕಣ್ಣುಗಳುಳ್ಳ ಮೋರೆಯನ್ನೂ ಧೈರ್ಯವು ಕುಗ್ಗಿರುವ ಕಾರಣ ಕುಂದಿದ ದೇಹವನ್ನೂ ಧರಿಸಿರುವನು.

**ಸೀತೆ**—ಆರ್ಯಪುತ್ರನು ಈ ರೀತಿ ಶೋಕಿಸುತ್ತಿರುವುದನ್ನು ಕೇಳಿ ನಾ ಚುವೆನು. ಛೀ ! ಛೀ ! ಈ ವಾನರಮಾತೇ ದಿಟವಾಗಿದ್ದ ಪಕ್ಷದಲ್ಲಿ ಆರ್ಯಪು ತ್ರನ ವಿರಹಪರಿಶ್ರಮವೂ ಕೂಡ ಸಫಲವಾಯಿತೆಂತಲೇ ಭಾವಿಸುವೆನು. ಈಜನದ ವಿಷಯದಲ್ಲಿ ಆರ್ಯಪುತ್ರನಿಗಿರುವ ಕನಿಕರವನ್ನೂ ಬಳಲಿಕೆಯ ನ್ನೂ ಕೇಳಿ ನನ್ನ ಅಂತರಂಗವು ಸುಖದುಃಖಗಳ ನಡುವೆ ಡೋಲಾಯಮಾ

ನವಾಗಿರುವುದು. ಭದ್ರಮುಖನೆ! ಆರ್ಯಪುತ್ರನಿಗೂ ನಿಮಗೂ ಸಂಗಮವಾದ ಬಗೆಯಾವದು?

ಹನೂ—ಆರ್ಯೆ! ಅವಧರಿಸು. ರಾಜಪುತ್ರಿ! ನಿನ್ನ ಸಲುವಾಗಿ ಕಪಿವರನಾದ ವಾಲಿಯನ್ನು ಕೊಂದು ವಾನರರಾಜ್ಯವನ್ನು ಸುಗ್ರೀವನಿಗೆ ಕೊಟ್ಟನು. ಸುಗ್ರೀವನು ನಿನ್ನನ್ನು ಹುಡುಕುವ ನಿಮಿತ್ತ ಹತ್ತು ದಿಕ್ಕುಗಳಿಗೂ ವಾನರರನ್ನು ಕಳುಹಿದನು. ದೇವಿ! ಅವರಲ್ಲಿ ನಾನು—ಆ ಹದ್ದಿನ ಮಾತಿನಂತೆ ಈಗ ನಿನ್ನನ್ನು ಕಂಡೆನು. ಇನ್ನೂ ಹೀಗೆಯೇ:—

ಸೀತೆ—ಆರ್ಯಪುತ್ರನನ್ನು ಈರೀತಿ ದುಃಖಕ್ಕೆ ಗುರಿಮಾಡಿದ ದೈವಕ್ಕೆ ಕರುಣೆಯೆ ಇಲ್ಲದಂತಿದೆ! ಹಾ!

ಹನೂ—ದೇವಿ! ಚಿಂತಿಸದಿರು. ರಾಮನು ದೊಡ್ಡಬಿಲ್ಲನ್ನು ತಳೆದು ಕಪಿಸೇನೆಯಿಂದ ಕೂಡಿ ರಾವಣನನ್ನು ಧ್ವಂಸಗೊಳಿಸಲು ಈ ಲಂಕೆಯನ್ನೇ ಸೇರುವನು

ಸೀತೆ—ನಾನೇನು ಕನಸು ಕಂಡೆನೇ? ಭದ್ರಮುಖ! ಏನು? ದಿಟವೆ? ನಾನರಿಯೆನು.

ಹನೂ—(ಸ್ವಗತಂ) ಅಯ್ಯೋ! ಕಷ್ಟ! ಪತಿವತ್ಸಲೆಯಾದ ಈಕೆಯು ಪತಿಯ ಪರಾಕ್ರಮವನ್ನು ಚೆನ್ನಾಗಿತಿಳಿದವಳಾಗಿದ್ದರೂ ದೇಹಾಂತರವನ್ನು ತಳೆದವಳಂತೆ ಶೋಕಪೀಡಿತೆಯಾಗಿ ಸ್ವಲ್ಪವೂ ನಂಬದೆ ಇರುವಳಲ್ಲಾ! (ಪ್ರಕಾಶಂ)

ರಾಜಪುತ್ರಿ! ಇಗೋ! ನಾನೀಗಲೇ ಉತ್ತಮವಾದ ಬಿಲ್ಲುಬಾಣಗಳನ್ನು ಧರಿಸಿದ ನಿನ್ನ ಪತಿಯನ್ನು ಕರೆತರುವೆನು. ನನ್ನ ವಿಷಯದಲ್ಲಿ ಸಂದೇಹ ಪಡಬೇಡ. ಪುರುಷ ಶ್ರೇಷ್ಠನ ಪಕ್ಕದಲ್ಲಿ ನಿಂತು ದುಃಖವನ್ನು ಹೋಗಲಾಡಿಸಿಕೊಳ್ಳುವವಳಾಗು. ನಂಬಿಕೆ ಇಡು.

ಸೀತೆ—ಭದ್ರಮುಖ! ನನ್ನ ಈ ಅವಸ್ಥೆಯನ್ನು ಕೇಳಿ ಆರ್ಯಪುತ್ರನು ಶೋಕಾಕುಲನಾಗದ ರೀತಿಯಲ್ಲಿ ನನ್ನ ವೃತ್ತಾಂತವನ್ನು ತಿಳುಹು.

ಹನೂ—ಆರ್ಯೆಯು ಅಪ್ಪಣೆ ಕೊಡಿಸಿದಂತೆ.

ಸೀತೆ—ಹೊರಡು. ಕಾರ್ಯವು ಸಿದ್ಧಿಸಲಿ.

ಹನೂ—ಅನುಗೃಹೀತನಾದೆನು. (ನಡೆತಂದು) ನನ್ನ ಆಗಮನವನ್ನು ರಾವಣನಿಗೆ ಹೇಗೆ ತಿಳಿಸಲಿ? ಇರಲಿ. ತಿಳಿಯಿತು.

ಕೋಗಿಲೆಗಳ ಹಿಂಡಿನಿಂದ ಕೂಡಿ ತಾವರೆಗಳ ಸಮುದಾಯದಿಂದ

ಮನೋಹರವೆನಿಸಿ ಕಂಗೊಳಿಸುವ ತೋಪುಗಳುಳ್ಳ ಈ ಉದ್ಯಾನವನ್ನೂ, ಕಾಲ್ಕುಗಿಲಿನಂತಿರುವ ಈ ತ್ರಿಕೂಟ ಪರ್ವತವನ್ನೂ ಕೈಕಾಲುಗಳ ಬಡಿಕೆದಿಂದ ಪುಡಿಮಾಡಿ ರಾಕ್ಷಸೇಶನ ಕೆಚ್ಚನ್ನು ಇಳಿಸುವೆನು.

( ಎಂದು ತೆರಳುವನು )

---

## ಮೂರನೆಯ ಅಂಕ.

ಶಂಕುಕರ್ಣ—( ಪ್ರವೇಶಿಸಿ ) ಯಾರಲ್ಲಿ? ಕಾಂಚನ ತೋರಣ ದ್ವಾರದಲ್ಲಿ ಕಾವಲು ಇರುವರು?

ಪ್ರತಿಹಾರಿ—( ಪ್ರವೇಶಿಸಿ ) ಆರ್ಯ! ನಾನು ವಿಜಯೆ. ಕಾರ್ಯವೇನು?

ಶಂಕು—ವಿಜಯೆ! ಅಶೋಕವನವೆಲ್ಲವೂ ಹಾಳಾಯಿತೆಂದು ಮಹಾರಾಜನಾದ ಲಂಕೇಶ್ವರನಿಗೆ ಬಿನ್ನವಿಸು. ಬಿನ್ನವಿಸು.

ಸ್ವಾಮಿಯ ಪಟ್ಟಮಹಿಷಿಯಾದ ಮಂಡೋದರಿಯು ಅಲಂಕಾರಪ್ರಿಯಳಾಗಿದ್ದರೂ ಮರಗಳಮೇಲಣ ವಾತ್ಸಲ್ಯದಿಂದ ಚಿಗುರುಗಳನ್ನು ಕೂಡ ಕುಯ್ಯುತ್ತಿರಲಿಲ್ಲವಲ್ಲಾ! ಹೆದರಿಕೆಯಿಂದ ಮಲಯಮಾರುತವೂ ಎಳೆಮರಗಳನ್ನು ಸೋಂಕದಂತೆ ಮೆಲ್ಲ ಮೆಲ್ಲನೆ ಬೀಸುತ್ತಿದ್ದಿತಲ್ಲಾ! ಇಂದ್ರಜಿತ್ತಿನ ಆ ಅಶೋಕವನವು ಭಗ್ನವಾಯಿತೆಂದು ಬಿನ್ನವಿಸು.

ಪ್ರತೀ—ಆರ್ಯ! ಅನುದಿನವೂ ಸ್ವಾಮಿಯ ಪಾದಮೂಲದಲ್ಲಿಯೇ ಊಳಿಗದಲ್ಲಿರುವ ಜನವು ಈ ದಿನ ಎಂದೂ ಇಲ್ಲದ ಇಷ್ಟೊಂದು ಸಂಭ್ರಮಗೊಳ್ಳಲು ಕಾರಣವೇನು? ಏನಿದು?

ಶಂಕು—ಎಲೌ! ಕಾರ್ಯವು ಮೀರಿಹೋಗುವದು. ಬೇಗನೆ ತಿಳುಹು.

ಪ್ರತೀ—ಆರ್ಯ! ಇದೋ ಬಿನ್ನವಿಸುವೆನು ( ಎಂದು ತೆರಳುವಳು.)

ಶಂಕು—( ಸುತ್ತಲೂ ನೋಡಿ ) ಓಹೋ! ಮಹಾರಾಜ ಲಂಕೇಶ್ವರನು ಇತ್ತಲಾಗಿಯೇ ಬರುತ್ತಿರುವನು. ಸ್ವಚ್ಛವಾದ ತಾವರೆಯನ್ನು ಹೋಲುವ ಭಯಂಕರವಾದ ನೇತ್ರಗಳಿಂದೊಪ್ಪಿ ಚಿನ್ನದ ದೀವಟಿಗೆಗಳನ್ನು ಹಿಡಿಸಿಕೊಂಡು ಕೋಪಯುಕ್ತನಾದ ಮಹಾರಾಜನು ಪ್ರಳಯಕಾಲದ ಸೂರ್ಯನಂತೆ ವೇಗವಾಗಿ ಇತ್ತಲೇ ಬರುತ್ತಿರುವನು.

ರಾವಣ—(ಪ್ರವೇಶಿಸಿ) ಏನದು? ಹೇಗೆ? ಹೊಸತೊಂದನ್ನು ಹೇಳುತ್ತಿರುವೆ? ಹೇಳು, ಬೇಗಹೇಳು, ಮುಮೂರ್ಷುವಾದ ಯಾವನು ಈ ರೀತಿ ದಿಟ್ಟತನದಿಂದ ವನವನ್ನು ಮುರಿದು ನನ್ನನ್ನು ಧಿಕ್ಕರಿಸಿರುವನು?

ಶಂಕು—(ಬಳಿಸಾರ್ದು) ಮಹಾರಾಜನು ಚಿತ್ತವಿಸಬೇಕು. ಏತಕ್ಕೆ ಬಂದಿರುವನೋ ನಾನರಿಯೆ. ಯಾವನೋ ಒಬ್ಬ ವಾನರನು ಸಂಭ್ರಮದಿಂದ ಅಶೋಕವನವನ್ನು ಪುಡಿಪುಡಿಮಾಡಿರುವನು.

ರಾವಣ—(ತಿರಸ್ಕಾರದಿಂದ) ಓಹೋ! ವಾನರನಷ್ಟೆ! ಬೇಗನೆ ಹೋಗಿ ನಿಗ್ರಹಿಸಿ ಹಿಡಿದುಕೊಂಡು ಬಾ.

ಶಂಕು—ಮಹಾರಾಜನ ಅಪ್ಪಣೆ. (ಎಂದು ತೆರಳುವನು)

ರಾವಣ—ಆಗಲಿ. ಆಗಲಿ. ಯುದ್ಧದಲ್ಲಿ ಮೂಲೋಕವನ್ನೂ ತತ್ತರಗೊಳಿಸಿದ ನನಗೆ ದೇವತೆಗಳು ಈ ಅಪ್ರಿಯವನ್ನು ಮಾಡಿರುವುದಾದರೆ— ಆ ಅಮೃತಾಶನರು ತಮ್ಮ ಹೆಡ್ಡತನದ ಪ್ರತಿಫಲವನ್ನು ಬೇಗನೆ ಅನುಭವಿಸಲಿ.

ಶಂಕು—(ಪ್ರವೇಶಿಸಿ) ಮಹಾರಾಜನು ಲಾಲಿಸಬೇಕು. ಮಹಾರಾಜನೆ! ಆ ವಾನರನು ಮಹಾಬಲನು. ಸಾಲ ಮರಗಳನ್ನು ತಾವರೆದಂಟಿನಂತೆ ಕಿತ್ತು ಬಿಸಡುವನು. ದಾರುಪರ್ವತವನ್ನು ಮುಷ್ಟಿಯಿಂದಲೇ ನುಗ್ಗಾಗಿಸಿದನು. ಬಳ್ಳಿ ಮನೆಗಳನ್ನೆಲ್ಲಾ ಅಂಗೈ ಪೆಟ್ಟಿನಿಂದಲೇ ಅಪ್ಪಳಿಸಿದನು. ವನಪಾಲರೆಲ್ಲರೂ ಗರ್ಜನೆಯಿಂದಲೇ ಪ್ರಜ್ಞೆ ತಪ್ಪಿ ಬಿದ್ದರು. ಅವನನ್ನು ಹಿಡಿಯುವದಕ್ಕೆ ಸಮರ್ಥವಾದ ಬಲವನ್ನು ಅಪ್ಪಣೆಮಾಡಿ ಕಳುಹಬೇಕು.

ರಾವಣ—ಹಾಗಾದರೆ ಆ ವಾನರನನ್ನು ಹಿಡಿಯುವಸಲುವಾಗಿ ಸಾವಿರ ಕಾಲಾಳುಗಳನ್ನು ಹೋಗ ಹೇಳು.

ಶಂಕು—ಮಹಾರಾಜನ ಅಪ್ಪಣೆ (ಎಂದು ತೆರಳಿ ಮರಳಿಹೊಕ್ಕು) ಮಹಾರಾಜನೆ! ಲಾಲಿಸು. ವೃಕ್ಷಯೋಧಿಯಾದ ಆ ವಾನರನು ನಮ್ಮ ಹೆಮ್ಮರಗಳಿಂದಲೇ ನಮ್ಮ ಕಿಂಕರರನ್ನೆಲ್ಲಾ ಬೇಗನೆ ಸಾಯಬಡಿದನು.

ರಾವಣ—ಏನು? ಕೊಂದು ಬಿಟ್ಟನೇ? ಹಾಗಾದರೆ ಅಕ್ಷಕುಮಾರನನ್ನು ವಾನರಗ್ರಹಣಾರ್ಥವಾಗಿ ಆಜ್ಞಾಪಿಸು.

ಶಂಕು—ಮಹಾರಾಜನ ಅಪ್ಪಣೆ (ಎಂದು ತೆರಳಿದನು.)

ರಾವಣ—(ಚಿಂತಿಸಿ) ಕುಮಾರನು ಅಸ್ತ್ರಪರಿಶ್ರಮಸಂಪನ್ನನು ಶೂರನು. ಬಲಶಾಲಿಯು ಅದಕಾರಣ ಆ ಕಪಿಯನ್ನು ನಿಗ್ರಹಿಸುವನು; ಇಲ್ಲವೇ ಕೊಂದರೂ ಕೊಲ್ಲಬಹುದು.

ಶಂಕು—ಮಹಾರಾಜನು ಮುಂದೆ ಮತ್ತೊಂದು ಸೇನೆಯನ್ನು ಆಜ್ಞಾಪಿಸಬೇಕು.-

**ರಾವಣ**—ಏತರಸಲುವಾಗಿ?

**ಶಂಕು**—ಮಹಾರಾಜನು ಚಿತ್ತವಿಸಬೇಕು. ವಾನರನಿಗ್ರಹಣಾರ್ಥವಾಗಿ ಕುಮಾರನು ಹೊರಟುದುದನ್ನು ನೋಡಿ, ಮಹಾರಾಜನ ಅಪ್ಪಣೆಯಿಲ್ಲದಿದ್ದರೂ ಐದುಮಂದಿ ಸೇನಾನಾಯಕರೂ ಕುಮಾರನನ್ನು ಹಿಂಬಾಲಿಸಿದರು.

**ರಾವಣ**—ಆಮೇಲೆ-ಆಮೇಲೆ.

**ಶಂಕು**—ಇದಿರುಬಂದ ಅವರನ್ನೆಲ್ಲಾ ಕಂಡು ಸ್ವಲ್ಪ ಹೆದರಿದವನಂತೆ ಹೊರಪಡಿಸಿ ತೋರಣವನ್ನು ಸೇರಿ ಆ ಕಪಿಯು ಸೇನಾನಾಯಕರೈವರನ್ನೂ ಬೀಳಿಸಿದನು.

**ರಾವಣ**—ಮುಂದೆ ಮುಂದೆ.

**ಶಂಕು**—ಬಳಿಕ ಅಕ್ಷಕುಮಾರನನ್ನು—ಸಿಟ್ಟಿನಿಂದ ಕಣ್ಣುಗಳನ್ನು ಕೆಂಪಡರಿಸಿ ವೇಗವಾಗಿ ರಥದ ಕುದುರೆಗಳನ್ನು ಓಡಿಸುತ್ತ, ಮಳೆಗಾಲದ ಮೋಡದಂತೆ ಬಾಣಗಳನ್ನು ಸುರಿಸುತ್ತಿದ್ದರೂ ಮೈಯ್ಯನ್ನು ಕೊಡವಿ ಬಾಣಗಳನ್ನೆಲ್ಲಾ ಕೆಡವಿ ಬೇಗನೆ ಕುಮಾರನ ರಥಕ್ಕೆ ಹಾರಿ ಕುತ್ತಿಗೆಗೆ ಕೈಹಾಕಿ ಮೋರೆಯನ್ನು ಮುದ್ದೆಮಾಡಿ ಮುಷ್ಟಿಯಿಂದಲೇ ಕುಮಾರನನ್ನು ಕೊನೆಗಾಣಿಸಿದನು.

**ರಾವಣ**—(ಕೋಪದಿಂದ) ಆಃ! ಹೇಗೆ? ಹೇಗೆ? ಕೊಂದನೆಂದು ಹೇಳುವಿಯಾ? ನಿಲ್ಲು ನಾನೇ ಹೋಗಿ ಆ ತುಚ್ಛಕಪಿಜಾತಿಯವನನ್ನು ಕ್ರೋಧಾಗ್ನಿಯ ಕಿಡಿಗಳಿಂದ ಕ್ಷಣಕಾಲದಲ್ಲಿ ಬೂದಿಮಾಡಿಬಿಡುವೆನು.

**ಶಂಕು**—ಮಹಾರಾಜನೆ! ಸೈರಿಸು. ಸೈರಿಸು. ಅಕ್ಷಕುಮಾರನ ವಧೆಯನ್ನು ಕೇಳಿ ಕ್ರೋಧಾಂಧನಾದ ಇಂದ್ರಜಿತನು ಆ ಕಪಿಯನ್ನು ಇದಿರಿಸಲು ಹೊರಟಿರುವನು.

**ರಾವಣ**—ಹಾಗಾದರೆ ಮುಂದಿನ ಸಮಾಚಾರವನ್ನು ತಿಳಿದು ಬಾ. ಹೋಗು.

**ಶಂಕು**—ಮಹಾರಾಜನ ಅಪ್ಪಣೆ (ಎಂದು ತೆರಳುವನು.)

**ರಾವಣ**—ಕುಮಾರನು ಅಸ್ತ್ರವಿದ್ಯಾಪರಿಶ್ರಮಸಂಪನ್ನನು. ಯುದ್ಧದಲ್ಲಿ ವೀರರಿಗೆ ಸಾವೋ ಗೆಲುವೋ ಎರಡರಲ್ಲೊಂದು ದಿಟ. ಆದರೂ ಇದು ಕ್ಷುದ್ರಕಾರ್ಯವು. ನನ್ನ ಮನಸ್ಸಿಗೆ ಪರಿತಾಪ.

**ಶಂಕು**--ಮಹಾರಾಜಾ! ಲಂಕೇಶ್ವರಾ! ಭದ್ರಮುಖಾ! ಶರಾಕು. ಕುಮಾರನಿಗೂ ಕಪಿಗೂ ಘೋರಯುದ್ಧವು ನಡೆಯಿತು. ಬಳಿಕ ಆ ಕಪಿಯು ಈಗಲೇ ಪಾಶದಿಂದ ಬದ್ಧನಾದನು.

**ರಾವಣ** - ಹುಂ! ಇಂದ್ರಜೀತನು ಶಾಖಾಮೃಗವನ್ನು ಬಂಧಿಸಿದನೆಂದರೆ ಇದರಲ್ಲಿ ಆಶ್ಚರ್ಯವೇನು? ಯಾರಲ್ಲಿ?

**ರಾಕ್ಷಸ**—(ಪ್ರವೇಶಿಸಿ) ಮಹಾರಾಜ! ಶರಾಕು!

**ರಾವಣ**— ಹೋಗು ವಿಭೀಷಣನನ್ನು ಬರಹೇಳು.

**ರಾಕ್ಷಸ**—ಮಹಾರಾಜನ ಅಪ್ಪಣೆ (ಎಂದು ತೆರಳುವನು).

**ರಾವಣ**—(ಶಂಕುಕರ್ಣನನ್ನು ಕುರಿತು) ನೀನೂ ಹೋಗಿ ಆ ವಾನರನನ್ನು ಕರೆದುಕೊಂಡು ಬಾ.

**ಶಂಕು**—ಮಹಾರಾಜನ ಅಪ್ಪಣೆ (ಎಂದು ತೆರಳುವನು).

**ರಾವಣ**—(ಚಿಂತಿಸಿ) ಆಹಾ! ಕಷ್ಟವು. ದೇವದಾನವರು ಒಟ್ಟುಗೂಡಿದರೂ ಲಂಕೆಯನ್ನು ಮನಸ್ಸಿನಿಂದ ಯೋಚಿಸುವದೂ ಕಷ್ಟ. ಇಂತಿರಲು ರಾವಣನನ್ನು ತಿರಸ್ಕರಿಸಿ ವಾನರನು ಹೊಕ್ಕಿರುವನಲ್ಲಾ! ಮತ್ತು ರಣರಂಗದಲ್ಲಿ ದೇವದಾನವರನ್ನು ಗೆದ್ದು ಕೆಚ್ಚಿನಿಂದ ಕೈಲಾಸಗಿರಿಯನ್ನು ಸೇರಿ, ಪಾರ್ವತಿಯಿಂದಲೂ ಪ್ರಮಥಗಣಗಳಿಂದಲೂ ಪರಿವೃತನಾದ ಶಿವನೊಂದಿಗೆ ಬೆಟ್ಟವನ್ನು ಅಲ್ಲಾಡಿಸಿ, ಸಂತುಷ್ಟನಾದ ಪರಮೇಶ್ವರನ ಅನುಗ್ರಹವನ್ನು ಪಡೆದು, ದೇವಿಯನ್ನೂ ನಂದಿಯನ್ನೂ ಲೆಕ್ಕಿಸದೆ ಹಿಂದಿರುಗುವಾಗ ಅವರಿಬ್ಬರೂ ನನಗೆ ಶಾಪವನ್ನಿತ್ತರಲ್ಲವೇ! ಆ ಶಾಪವೇ ಕಪಿರೂಪದಿಂದ ಈಗ ಈ ವಿಕಾರವನ್ನುಂಟುಮಾಡುತ್ತಿರಬಹುದು!

**ವಿಭೀಷಣ**—(ಪ್ರವೇಶಿಸಿ ಯೋಚನೆಯಿಂದ) ಅಯ್ಯೋ! ನಮ್ಮ ಮಹಾರಾಜನ ಬುದ್ಧಿಯು ದಿನದಿನಕ್ಕೂ ವ್ಯತ್ಯಸ್ತವಾಗುತ್ತಿರುವದು. ಏಕೆಂದರೆ:--ಮೈಥಿಲಿಯನ್ನು ಹಿಂದಕ್ಕೆ ಕೊಡುವುದಾಗಿ ನಾನಾಬಗೆಯಿಂದ ಹೇಳಿದೆನು. ಸ್ನೇಹಿತರಿಗೆ ಶೋಕವನ್ನುಂಟುಮಾಡುವ ಸಲುವಾಗಿ ನನ್ನ ಮಾತು ಅವನಿಗೆ ಕೇಳುವದೇ ಇಲ್ಲ. (ಬಳಿಸಾರ್ದು) ಮಹಾರಾಜನೆ! ಜಯಶೀಲನಾಗು

**ರಾವಣ**—ವಿಭೀಷಣಾ! ಬಾ. ಬಾ, ಕುಳಿತುಕೊ.

**ವಿಭೀ**— ಇದೋ ಕುಳಿತುಕೊಳ್ಳುವೆನು. (ಎಂದು ಕುಳಿತುಕೊಳ್ಳುವನು)

**ರಾವಣ**— ವಿಭೀಷಣಾ! ಇದೇಕೆ? ನಿರ್ವಿಣ್ಣನಂತೆ ಕಾಣುವೆ?

**ವಿಭೀ**—ಭೃತ್ಯನ ಮಾತನ್ನು ಸ್ವಾಮಿಯು ಗ್ರಹಿಸದಿದ್ದರೆ ನಿರ್ವೇದವೇ ಅಷ್ಟೆ.

**ರಾವಣ**— ಈ ಕಥೆಯನ್ನು ಅಲ್ಲಿಯೇ ಬಿಡು. ನೀನೂ ಹೋಗಿ ಆ ವಾನರನನ್ನು ಹಿಡಿದುಕೊಂಡು ಬಾ.

**ವಿಭೀ**—ಮಹಾರಾಜನ ಅಪ್ಪಣೆ ( ಎಂದು ತೆರಳುವನು )

( ರಾಕ್ಷಸರಿಂದ ಹಿಡಿಯಲ್ಪಟ್ಟ ಹನೂಮಂತನ ಪ್ರವೇಶ.)

**ಎಲ್ಲರೂ**— ಆಃ! ಇತ್ತ ಇತ್ತ.

**ಹನೂ**—ದುರಳನಾದ ಆ ರಾಕ್ಷಸನು ನನ್ನನ್ನೇನೂ ಜಗ್ಗಿಸಲಿಲ್ಲ. ರಾಕ್ಷಸೇಶ್ವರನನ್ನು ನೋಡಬೇಕೆಂಬ ಕುತೂಹಲದಿಂದ ನಾನೇ ಅವರ ಕೈಗೆ ಸಿಕ್ಕಿದೆನು. ( ಎಂದು ಬಳಿಸಾರ್ದು )

ಎಲೈ! ರಾಜನೆ! ನೀನು ಸುಖವಾಗಿರುವೆಯಷ್ಟೆ?

**ರಾವಣ**—( ತಿರಸ್ಕಾರದಿಂದ ) ವಿಭೀಷಣಾ! ಇದೇನೋ ಇವನ ಕೆಲಸ?

**ವಿಭೀ**—ಮಹಾರಾಜನೆ! ಇದಕ್ಕಿಂತಲೂ ಅತಿಶಯವು ಉಂಟು.

**ರಾವಣ**—ನೀನು ಹೇಗೆ ಬಲ್ಲೆ?

**ವಿಭೀ**—ನೀನಾರೆಂದು, ಮಹಾರಾಜನೇ ಪ್ರಶ್ನೆಮಾಡಬಹುದು.

**ರಾವಣ**— ಎಲೋ ಮಂಗಾ! ನೀನು ಯಾರು? ನಮ್ಮ ಅಂತಃಪುರವನ್ನು ಹೊಕ್ಕು ಜಗ್ಗಿಸಲು ಕಾರಣವೇನು?

**ಹನೂ**—ಅಯ್ಯಾ! ಕೇಳು.

ನಾನು ಅಂಜನೆಯಲ್ಲಿ ಮಾರುತನಿಂದ ಜನಿಸಿದವನು. ರಾಘವನು ನನ್ನನ್ನು ಕಳುಹಿದನು. ನನ್ನ ಹೆಸರು ಹನೂಮಂತ.

**ವಿಭೀ**—ಮಹಾರಾಜನೆ! ಕೇಳಿದೆಯಲ್ಲವೆ?

**ರಾವಣ**—ಕೇಳಿದರೇನಾಯಿತು?

**ವಿಭೀ**—ಹನೂಮನ್! ಪೂಜ್ಯನಾದ ರಾಘವನು ಹೇಳಿದುದೇನು?

**ಹನೂ**—ಅಯ್ಯಾ! ರಾಮನ ಶಾಸನವನ್ನು ಕೇಳು.

ರಾವಣ—ಏನು? ಏನು? ಶಾಸನವೆಂದೆಯಾ? ಆಃ! ಈ ವಾನರನನ್ನು ಕೊಲ್ಲಿರಿ.

ವಿಭೀ—ಮಹಾರಾಜನೆ! ಸೈರಿಸು ಸೈರಿಸು. ಎಂತಹ ಅಪರಾಧದಲ್ಲಿಯೂ ದೂತರು ವಧೆಗೆ ತಕ್ಕವರಲ್ಲ. ಅಥವಾ ರಾಮನ ಮಾತನ್ನು ಕೇಳಿ ಬಳಿಕ ಮಹಾರಾಜನು ಚಿತ್ತಬಂದಂತೆ ನಡೆಯಿಸಬಹುದು.

ರಾವಣ—ಎಲೋ ಮಂಗಾ! ಆ ಮನುಷ್ಯನು ಏನೆಂದು ಹೇಳಿದನು?

ಹನೂ—ಅಯ್ಯಾ! ಕೇಳು.

"ನೀನು ಶಂಕರನನ್ನೇ ಮೊರೆಹೊಗಬಾರದೇಕೆ? ಇಲ್ಲವೇ ಅತ್ಯಂತ ಕಷ್ಟಸಾಧ್ಯವಾದ ಪಾತಾಳದುರ್ಗವನ್ನಾದರೂ ಸೇರು. ಸರ್ವಾವಯವಗಳನ್ನೂ ಬಾಣದಿಂದ ಭೇದಿಸಿ ನಿನ್ನನ್ನು ಯಮನ ಮನೆಗೆ ಕಳುಹುವೆನು" ಎಂದು.

ರಾವಣ—ಹ! ಹ!! ಹ!!!.

ದಿವ್ಯಾಸ್ತ್ರಗಳಿಂದ ದೇವಸಮುದಾಯವನ್ನು ಜಗ್ಗಿಸಿರುವೆನು. ದೈತ್ಯೇಂದ್ರರೆಲ್ಲರೂ ನನ್ನ ವಶವರ್ತಿಗಳು. ಪುಷ್ಪಕವಿಮಾನಾಪಹರಣದಿಂದ ಕುಬೇರನು ಇಳಿದುಹೋದನು ಎಲೋ! ಮಾನುಷನಾದ ರಾಮನು ನನ್ನನ್ನು ಹೇಗೆ ಇದಿರಿಸುವನೊ?

ಹನೂ—ಇಂತಹ ನೀನು ಆತನ ಮಡದಿಯನ್ನು ಕದ್ದುತಂದುದೇಕೆ?

ವಿಭೀ—ಭಲಾ! ಹನೂಮಂತನು ಚೆನ್ನಾಗಿ ಹೇಳಿದನು.

ರಾಕ್ಷಸಪುಂಗವಾ! ಮಾಯೆಯಿಂದ ರಾಮನನ್ನು ಅಗಲಿಸಿ ಭಿಕ್ಷುವೇಷವನ್ನು ತಳೆದು ವೇಷದಿಂದ ಆಕೆಯನ್ನು ಕದ್ದು ತಂದೆಯಲ್ಲವೇ?

ರಾವಣ – ವಿಭೀಷಣಾ! ಏನು? ವಿಪಕ್ಷ ಪಕ್ಷವನ್ನು ಅವಲಂಬಿಸುವೆಯೊ?

ವಿಭೀ—ರಾಜನೆ! ಪ್ರಸನ್ನನಾಗು. ನನ್ನ ಮಾತು ಹಿತವೇ ಹೊರತು ಬೇರೆಯಲ್ಲ. ರಾಘವ ಧರ್ಮಪತ್ನಿಯನ್ನು ಹಿಂದಕ್ಕೆ ಕೊಡು. ರಾಕ್ಷಸಪುಂಗವನಾದ ನಿನ್ನಮೂಲಕ ಈ ಕುಲವು ಹಾಳಾಗುವುದನ್ನು ನಾನು ಬಯಸುವುದಿಲ್ಲ.

ರಾವಣ—ವಿಭೀಷಣಾ! ಸಾಕು. ಸಾಕು. ಹೆದರದಿರು.

ಜೋಲಾಡುವ ಸಟೆಗಳುಳ್ಳ ಸಿಂಹವನ್ನು ಜಿಂಕೆಯು ಕೆಡುವುದೆಲ್ಲಿಯಾದರೂ ಉಂಟೇ? ಮದ್ದಾನೆಯನ್ನು ನರಿಯು ಕೊಲ್ಲುವುದೂ ಉಂಟೆ?

ಹನೂ—ಅಯ್ಯಾ! ರಾವಣಾ! ನಿನ್ನ ಭಾಗ್ಯವು ಹಾಳಾಗುವ ಕಾಲವು ಬಂದಿದೆ. ರಾಮನ ವಿಷಯದಲ್ಲಿ ಹೀಗೆ ಹೇಳುವುದು ಯುಕ್ತವೇ? ಬೇಡವಯ್ಯಾ!

ರಾಕ್ಷಸಾಧಮಾ! ನಿರ್ಭಾಗ್ಯಾ! ನಿಸ್ತೇಜಸ್ಕಾ! ರಾವಣಾ! ವೀರಾಗ್ರಗಣ್ಯನೂ ದೇವೇಂದ್ರಸಮಾನನೂ ಲೋಕೈಕನಾಥನೂ ಎನಿಸಿದ ರಾಮನನ್ನು ಈರೀತಿ ಹೀಯಾಳಿಸಬಹುದೇ?

ರಾವಣ—ಹೇಗೆ? ಹೇಗೆ? ಹೆಸರು ಹಿಡಿದು ಮಾತನಾಡುವನಲ್ಲಾ! ಈ ಮಂಗನನ್ನು ಕೊಲ್ಲಿರಿ. ಅಥವಾ ದೂತವಧೆಯು ನಿಂದ್ಯವಾದುದು. ಶಂಕುಕರ್ಣಾ! ಬಾಲವನ್ನು ಸುಟ್ಟು ಈ ಮಂಗನನ್ನು ಓಡಿಸಿರಿ.

ಶಂಕು—ಮಹಾರಾಜನ ಅಪ್ಪಣೆ. ಎಲೋ! ಇತ್ತ. ಇತ್ತ.

ರಾವಣ—ಅಥವಾ ಇಲ್ಲಿಬಾ.

ಹನೂ—ಇದೋ ಬಂದಿರುವೆನು

ರಾವಣ—ನಾನು ಹೇಳಿದೆನೆಂದು ಆ ಮನುಷ್ಯನಿಗೆ ಹೇಳು. ರಾಮಾ! ದಾರಾಪಹರಣದಿಂದ ನಿನ್ನನ್ನು ನಿಗ್ರಹಿಸಿರುವೆನು. ಧನುರ್ವಿದ್ಯೆಯಲ್ಲಿ ನಿನಗೆ ಶ್ಲಾಘನೆಯಿದ್ದಪಕ್ಷದಲ್ಲಿ ಒಂದು ದೊಡ್ಡ ಯುದ್ಧವನ್ನು ಬೇಗನೆ ಕೊಡಬಹುದು.

ಹನೂ—ಬೇಗನೆ ನೋಡುವೆಯಂತೆ. ಸುತ್ತಲೂ ಕಪಿಗಳು ಮುತ್ತಿಕೊಂಡು ಕೋಟೆಕೊತ್ತಲಗಳನ್ನೆಲ್ಲಾ ಹಾಳುಮಾಡಿ, ಪ್ರಮದವನದೊಂದಿಗೆ ಲಂಕೆಯೆಲ್ಲವೂ ನಿರ್ಮೂಲವಾಗಿ ನೀನೂ ರಾಮನ ಬಲ್ಲಿನ ದನಿಯಿಂದಲೇ ಸೋತು ಹೋಗುವೆ.

ರಾವಣ—ಆಃ! ಇವನನ್ನು ಹೊರಕ್ಕೆ ತಳ್ಳಿರಿ

ರಾಕ್ಷಸ—ಇತ್ತ. ಇತ್ತ. (ಎಂದು ಹನೂಮಂತನನ್ನು ಕರೆದುಕೊಂಡು ಹೋಗುವರು)

ವಿಭೀ—ಮಹಾರಾಜನೆ! ಲಾಲಿಸು. ಮಹಾರಾಜನ ಕ್ಷೇಮಕ್ಕಾಗಿ ಒಂದು ಮಾತನ್ನು ಹೇಳಬೇಕೆಂದು ಬಯಸುತ್ತೇನೆ.

ರಾವಣ— ಹೇಳಬಹುದು. ಆ ಶ್ರೇಯಸ್ಸನ್ನು ನಾವೂ ಕೇಳುವೆವು.

ವಿಭೀ—ಸರ್ವವಿಧದಿಂದಲೂ ರಾಕ್ಷಸಕುಲಕ್ಕೆ ವಿನಾಶವು ಬಂದಿರುವುದೆಂದು ಭಾವಿಸುವೆನು.

ರಾವಣ—ಯಾವ ಕಾರಣದಿಂದ?

ವಿಭೀ—ಮಹಾರಾಜನ ವಿಪ್ರತಿಪತ್ತಿಯಿಂದ.

ರಾವಣ—ನನ್ನ ವಿಪ್ರತಿಪತ್ತಿಯಾದರೂ ಯಾವುದು?

ವಿಭೀ—ಸೀತಾಪಹರಣವೇ ಅಲ್ಲವೆ?

ರಾವಣ—ಸೀತಾಪಹರಣದಿಂದ ದೋಷವೇನಾದೀತು?

ವಿಭೀ—ಅಧರ್ಮವೂ

ರಾವಣ—ನಿನ್ನಮಾತು ಇನ್ನೂ ಮುಗಿದಿಲ್ಲವೆಂದು ತೋರುವುದು. ಅದನ್ನೂ ಹೇಳು.

ವಿಭೀ—ಅದೇ? ಹೇಳಿದೆನಲ್ಲವೇ!

ರಾವಣ—ವಿಭೀಷಣಾ! ಏಕೆ ಬಚ್ಚಿಡುವೆ? ಸತ್ಯವಾಗಿ ಹೇಳದಿದ್ದರೆ ನನ್ನ ಪ್ರಾಣಗಳಮೇಲೆ ಆಣೆ.

ವಿಭೀ—ಮಹಾರಾಜನು ಅಭಯಪ್ರದಾನಮಾಡಬೇಕು.

ರಾವಣ—ಅಭಯವನ್ನು ಕೊಟ್ಟಿರುವೆನು. ಹೇಳಬಹುದು.

ವಿಭೀ—ಬಲವದ್ವಿರೋಧವೂ ಕೂಡ.

ರಾವಣ—ಹೇಗೆ? ಹೇಗೆ? ಬಲವದ್ವಿರೋಧವೆಂತಲೋ? ಈ ರಾಕ್ಷಸಾಧಮನು ಶತ್ರುಪಕ್ಷವನ್ನು ಅವಲಂಬಿಸಿ. ನನಗೆ ಸಿಟ್ಟನ್ನು ಎಬ್ಬಿಸಿ, ಧೈರ್ಯವಾಗಿ ಮಾತನಾಡುತ್ತಿರುವನು!

ಯಾರಲ್ಲಿ?

ನನ್ನ ಸೌಭ್ರಾತ್ರವನ್ನು ಲೆಕ್ಕಿಸದೆ ಶತ್ರುಪಕ್ಷವನ್ನು ಹಿಡಿದ ಇವನನ್ನು ಮುಂಭಾಗದಲ್ಲಿ ನೋಡಲೊಲ್ಲೆನು. ಅಪರಿಪದ ಇವನನ್ನು ಹೊರಕ್ಕೆ ಸಾಗಿಸು.

ವಿಭೀ—ಮಹಾರಾಜನೆ! ಸೈರಿಸು. ತಾಳ್ಮೆಯಿರಲಿ. ನಾನೇ ತೆರಳುವೆನು. ಅರಸನೆ! ನಿನ್ನಿಂದ ನಾನು ಶಾಸಿತನಾಗಿರುವೆನು. ನಾನೇನೂ ದೋಷಿಯಲ್ಲ. ಹೋಗುವೆನು. ಕಾಮಕ್ರೋಧಗಳನ್ನು ಬಿಟ್ಟು ಯುಕ್ತತೋರಿದಂತೆ ಮಾಡು. (ಎಂದು ನಡೆತಂದು) ನಾನೀಗಲೇ ಕಮಲಲೋಚನನೂ, ಉಗ್ರಚಾಪನೂ, ರಾವಣವಧೆಯ ಸಲುವಾಗಿ ಕೃತಪ್ರತಿಜ್ಞನೂ, ಆಶ್ರಿತರಿಗೆ ಹಿತಮಾಡುವುದರಲ್ಲಿ ಪ್ರಖ್ಯಾತಿಗೊಂಡವನೂ ಎನಿಸಿದ ನರದೇವ

ನನ್ನು ಆಶ್ರಯಿಸಿ ನಷ್ಟವಾದ ಪಿಶಾಚ ಕುಲವನ್ನು ಮರಳಿ ಉದ್ಧರಿಸು ವೆನು. ( ಎಂದು ತೆರಳುವನು )

**ರಾವಣ**--ಭಲೆ ! ವಿಭೀಷಣನು ತೊಲಗಿದನು. ನಾನೂ ನಗರರಕ್ಷಣೆಯನ್ನು ಮಾಡಿಸುವೆನು. ( ಎಂದು ತೆರಳುವನು ).

ಇಂತಿದು ಮೂರನೆಯ ಅಂಕವು.

---

## ನಾಲ್ಕನೆಯ ಅಂಕ.

( ವಾನರ ಕಂಚುಕಿಯ ಪ್ರವೇಶ )

**ಕಂಚುಕಿ**--ಬಲಾಧ್ಯಕ್ಷನೇ! ವಾನರ ಸೇನೆಯು ಸಿದ್ಧವಾಗಿರುವಂತೆ ಆಜ್ಞೆಮಾಡು.

**ಸೇನಾಪತಿ**--ಅರ್ಯ! ಸನ್ನಾಹಕ್ಕೆ ಕಾರಣವೇನು ?

**ಕಂಚುಕಿ**--ಪೂಜ್ಯನಾದ ರಾಮನು. ಆರ್ಯರಾಮನ ಪಟ್ಟದರಸಿಯ ಸಮಾಚಾರವನ್ನು ನಮ್ಮ ಹನೂಮಾನನು ತಂದಿರುವನಷ್ಟೆ !

**ಸೇನಾಪತಿ**--ಹೇಗೆ ? ಹೇಗೆ ?

**ಕಂಚುಕಿ**--ಕೇಳು. ಧರ್ಮಮಾರ್ಗವನ್ನು ಬಿಟ್ಟ ಪೌಲಸ್ತ್ಯನ ತಿರುಕುಳಕ್ಕೆ ಸಿಲುಕಿ ರಾಜನಂದಿನಿಯು ಲಂಕೆಯಲ್ಲಿ ಮರುಗುತ್ತಿರುವಳು. ಈ ಸುದ್ದಿಯನ್ನು ಕೇಳಿ ಶೋಕಾಭಿಭೂತನಾದ ರಾಮನ ಕಾರ್ಯಸಾಧನೆಗಾಗಿ ಪ್ರತಿಪಕ್ಷಭೀಕರವಾದ ಸೈನ್ಯಸನ್ನಾಹವನ್ನು ಮಹಾರಾಜನು ಆಜ್ಞಾಪಿಸಿರುವನು.

**ಸೇನಾಪತಿ**--ಹಾಗೆಯೇ ! ಮಹಾರಾಜನ ಅಪ್ಪಣೆಯಂತೆಯೇ ಆಗಲಿ.

**ಕಂಚುಕಿ**--ಕಪಿಸೇನೆಯು ಸನ್ನಾಹಯುಕ್ತವಾಗಿರುವುದೆಂಬ ಸಮಾಚಾರವನ್ನು ನಾನೂ ಮಹಾರಾಜನಿಗೆ ಅರಿಕೆಮಾಡುವೆನು. ( ಎಂದಿಬ್ಬರೂ ತೆರಳುವರು )

( ರಾಮ, ಲಕ್ಷ್ಮಣ, ಸುಗ್ರೀವ, ಹನೂಮಂತರ ಪ್ರವೇಶ )

**ರಾಮ**--ವಿಶಾಲವಾದ ತಪ್ಪಲು, ಬಳ್ಳಿಮನೆ, ಗವಿಗಳಿಂದೊಪ್ಪಿ, ಮೇಘಗಳಿಂದ ಕಂಗೊಳಿಸುವ ಪರ್ವತಗಳನ್ನೂ, ಸಿಂಹ, ಹುಲಿ, ಆನೆಗಳಿಂದ ಕುಡಿಯಲ್ಪಟ್ಟ ಜಲವುಳ್ಳ ನದಿಗಳನ್ನೂ, ಫಲಪುಷ್ಪಭರಿತವಾದ

ಮರಗಳಿಂದ ಮನೋಹರವಾದ ದೊಡ್ಡ ಕಾಡುಗಳನ್ನೂ ದಾಟಿ, ಕಪಿಸೇನೆಯೊಂದಿಗೆ ಈಗ ಸಮುದ್ರತೀರವನ್ನು ಸೇರಿರುವೆನು.

ಲಕ್ಷ್ಮಣ--ಪೂಜ್ಯನಾದ ಈ ವರುಣನು ಕಾರ್ಮುಗಿಲಿನಂತೆಯೂ, ಇಂದ್ರನೀಲಮಣಿಯಂತೆಯೂ ಕಂಗೊಳಿಸುವ ಜಲರಾಶಿಯಿಂದೊಪ್ಪಿ, ಚಾರುತರವಾದ ನೊರೆಯ ಸಮುದಾಯವೆಂಬ ಮನೋಹರವಾದ ಹಾರವನ್ನು ತಳೆದು, ಪ್ರವಾಹದಿಂದ ಬಂದು ಸೇರುತ್ತಿರುವ ಸಾವಿರಾರು ಹೊಳೆಗಳೆಂಬ ತೋಳುಗಳಿಂದ ಕೂಡಿದ ಸಮುದ್ರರಾಜನು ಮಲಗಿರುವ ವಿಷ್ಣುವಿನಂತೆ ಕಂಗೊಳಿಸುವನು.

ರಾಮ—ಹಗೆಯನ್ನು ನಾಶಗೊಳಿಸುವಸಲುವಾಗಿ ಬಾಣವನ್ನು ಹಿಡಿದಿರುವ ನನಗೆ ಅಡ್ಡಬಂದು ಸಾಗರವು ಹಗೆಯನ್ನು ಸಜೀವನನ್ನಾಗಿ ಮಾಡುತ್ತಿರುವುದು.

ಸುಗ್ರೀವ--( ಮೇಲೆ ನೋಡಿ ) ಓಹೋ!-ಅಂತರಿಕ್ಷದಲ್ಲಿ ಕಾರ್ಮುಗಿಲನ್ನು ಹೋಲುವ ದೇಹದಿಂದೊಪ್ಪಿ, ಸ್ವಚ್ಛವಾದ ಸ್ವರ್ಣಾಭರಣಗಳಿಂದ ಕಂಗೊಳಿಸುವ ದೇಹವುಳ್ಳ ಈ ರಾಕ್ಷಸನು ಬೆಂಕಿಯನ್ನು ಹುಗಲೆಳಸಿದ ಶಲಭದಂತೆ ಎಲ್ಲಿಂದಲೋ ಬರುತ್ತಿರುವನು.

ಹನೂ--ಎಲೈ ಕಪಿವೀರರೇ! ನೀವೆಲ್ಲರೂ ಜಾಗರೂಕತೆಯಿಂದ ಇರಬೇಕು. ಬೆಟ್ಟಗಳಿಂದಲೂ ಮರಗಳಿಂದಲೂ, ಮುಷ್ಟಿಬಂಧಗಳಿಂದಲೂ ಹಲ್ಲು, ಉಗುರು, ಮೊಳಕಾಲುಗಳಿಂದಲೂ ಈ ರಾಕ್ಷಸನನ್ನು ಕೊಲ್ಲುವಸಲುವಾಗಿ ಜಾಗರೂಕತೆಯನ್ನು ಪಡೆದು ನಮ್ಮ ನರೇಂದ್ರನನ್ನು ಕಾಪಾಡತಕ್ಕದ್ದು.

ರಾಮ—ರಾಕ್ಷಸನೊ ? ಹನೂಮನ್! ಸಾಕು. ಸಂಭ್ರಮಗೊಳ್ಳದಿರು.

ಹನೂ--ದೇವರ ಚಿತ್ತ.

ವಿಭೀ--( ಪ್ರವೇಶಿಸಿ ) ಅಬ್ಬಬ್ಬ! ರಾಮನ ಶಿಬಿರ ಸನ್ನಿವೇಶವನ್ನು ಸೇರಿರುವೆನು. ( ಯೋಚಿಸಿ ) ದೂತನನ್ನೂ ಕಳುಹಿಸದೆ, ನನ್ನ ಆಗಮನ ವೃತ್ತಾಂತವನ್ನೂ ತಿಳಿಸದೆ. ಶತ್ರುಸಂಬಂಧಿಯಾದ ನನ್ನನ್ನು ಪೂಜ್ಯನಾದ ರಾಘವನು ಏನೆಂದು ತಿಳಿಯುವನೋ ಅರಿಯೆನು. ಏಕೆಂದರೆ ?--

ಕ್ರುದ್ಧನಾದ ಯಾವನ ಇದಿರಿನಲ್ಲಿ ದೇವತೆಗಳೊಡಗೂಡಿದ ವಜ್ರಪಾಣಿಯೂ ನಿಲ್ಲಲು ಶಕ್ತನಲ್ಲ. ಅಂತಹ ಸುರವೈರಿಯ ತಮ್ಮನು ಶರಣಾ

ಗತನಾದನೆಂದರೆ ರಘುಪತಿಯು ಏನೆಂದು ಹೇಳುವನೋ ಎಂಬುದಾಗಿ ನನ್ನ ಹೃದಯವು ಶಂಕಾಸ್ಪದವಾಗಿರುವುದು. ಅಥವಾ

ಚಿತ್ತಶುದ್ಧಿಸಂಪನ್ನನಾದ ನಾನು ಧರ್ಮಸೂಕ್ಷ್ಮವನ್ನು ಬಲ್ಲವನೂ, ಸಜ್ಜನ ಶಿಖಾಮಣಿಯೂ, ಆಶ್ರಿತವತ್ಸಲನೂ ಎನಿಸಿದ ರಾಮನವಿಷಯದಲ್ಲಿ ಸಂದೇಹಪಡಬಹುದೇ ? ( ಕೆಳಗೆ ನೋಡಿ ) ಇದೇ ರಘುಪುಂಗವನ ಶಿಬಿರವು. ಇಲ್ಲಿ ಇಳಿಯುವೆನು ( ಎಂದು ಇಳಿದು ) ಭಲಾ ! ಇಲ್ಲಿಯೇ ಇದ್ದು ನನ್ನ ಆಗಮನವನ್ನು ಸ್ವಾಮಿಗೆ ಅರಿಕೆಮಾಡುವೆನು.

ಹನೂ —( ಮೇಲೆ ನೋಡಿ ) ಓಹೋ ! ಏನಿದು ? ಪೂಜ್ಯನಾದ ವಿಭೀಷಣನು.

ವಿಭೀ—ಓಹೋ ! ಹನೂಮಂತನು ! ಹನೂಮನ್ ! ನನ್ನ ಆಗಮನವನ್ನು ಸ್ವಾಮಿಗೆ ಬಿನ್ನವಿಸು.

ಹನೂ—ಒಳ್ಳೆಯದು ( ಎಂದು ರಾಮನ ಬಳಿಸಾರ್ದು ) ಸ್ವಾಮಿಯು ಜಯಶೀಲನಾಗಲಿ.

ರಾಜನೆ ! ನಿನ್ನ ಸಲುವಾಗಿಯೇ ಸೋದರನಿಂದ ತಳ್ಳಲ್ಪಟ್ಟ ಧರ್ಮಾತ್ಮನೆನಿಸಿದ ಈ ವಿಭೀಷಣನು ನಿನ್ನನ್ನು ಮೊರೆಹೊಕ್ಕಿರುವನು.

ರಾಮ—ಏನು ? ವಿಭೀಷಣನು ಮೊರೆಹೊಕ್ಕಿರುವನೇ ? ವತ್ಸಾಲಕ್ಷ್ಮಣಾ ! ಹೋಗು. ಸತ್ಕರಿಸಿ ವಿಭೀಷಣನನ್ನು ಒಳಕ್ಕೆ ಕರೆದುಕೊಂಡು ಬಾ.

ಲಕ್ಷ್ಮಣ—ಆರ್ಯನ ಅಪ್ಪಣೆ.

ರಾಮ— ಸುಗ್ರೀವಾ ! ನೀನೇನನ್ನೋ ಹೇಳಬೇಕೆಂದು ಕುತೂಹಲವುಳ್ಳವನಂತೆ ಕಾಣುವೆ !

ಸುಗ್ರೀವ—ದೇವಾ ! ರಾಕ್ಷಸರು ಮಾಯಾವಿಗಳು. ಮೋಸದಿಂದ ಯುದ್ಧಮಾಡತಕ್ಕವರು. ಆದುದರಿಂದ ಚೆನ್ನಾಗಿ ನಿಶ್ಚಯಿಸಿ, ವಿಭೀಷಣನನ್ನು ಒಳಕ್ಕೆ ಕರೆತರಬಹುದು.

ಹನೂ—ಮಹಾರಾಜನೆ ! ಹಾಗಲ್ಲ.

ಸ್ವಾಮಿಯಲ್ಲಿ ನಾವೆಂತು ಭಕ್ತಿಯಿಂದ ನಡೆದುಕೊಳ್ಳುವೆವೋ, ವಿಭೀಷಣನೂ ಅಂತೆಯೇ. ಅಣ್ಣನಸಂಗಡ ಹೋರಾಡುತ್ತಿದ್ದುದನ್ನು ನಾನು ಹಿಂದೆಯೇ ನೋಡಿರುವೆನು.

ರಾಮ—ಹಾಗಾದರೆ ಹೋಗು. ವಿಭೀಷಣನನ್ನು ಸತ್ಕರಿಸಿ ಕರೆದುಕೊಂಡು ಬಾ.

ಲಕ್ಷ್ಮಣ—ಆರ್ಯನ ಅಪ್ಪಣೆ. ( ಎಂದು ನಡೆತಂದು ) ಓಹೋ! ವಿಭೀಷಣನು. ವಿಭೀಷಣಾ! ಕುಶಲವಾಗಿರುವೆಯಾ?

ವಿಭೀ—ಕುಮಾರ ಲಕ್ಷ್ಮಣನಂತೆ ಕಾಣುವುದು. ಕುಮಾರಾ! ಇಂದಿಗೆ ಕುಶಲಿಯಾದೆನು.

ಲಕ್ಷ್ಮಣ—ವಿಭೀಷಣಾ! ಅಣ್ಣನಬಳಿಗೆ ಹೋಗುವ.

ವಿಭೀ—ಒಳ್ಳೆಯದು. ( ಇಬ್ಬರೂ ನಡೆತರುವರು )

ಲಕ್ಷ್ಮಣ—ಆರ್ಯನು ಜಯಶೀಲನೆನಿಸಿರುವನು.

ವಿಭೀ—ಸ್ವಾಮಿಯು ಪ್ರಸನ್ನನಾಗಬೇಕು. ಸ್ವಾಮಿಗೆ ಮಂಗಳವಾಗಲಿ.

ರಾಮ—ಓಹೋ! ವಿಭೀಷಣನು. ವಿಭೀಷಣಾ! ಕುಶಲವಷ್ಟೇ!

ವಿಭೀ—ಈಗ ಕುಶಲಿಯಾದೆನು.

ಪದ್ಮಪತ್ರಾಕ್ಷನೂ ಶರಣ್ಯನೂ ಎನಿಸಿದ ನಿನ್ನನ್ನು ಮೊರೆಹೊಕ್ಕಿರುವೆನಾಗಿ ಈಗ ಕುಶಲಿಯಾದೆನು. ರಾಜನೆ! ನಿನ್ನ ದರ್ಶನದಿಂದ ಪಾಪರಹಿತನಾದೆನು.

ರಾಮ—ಇಂದು ಮೊದಲು ನನ್ನ ಮಾತಿನಂತೆ ನೀನು ಲಂಕಾಧಿಪತಿಯಾಗು.

ವಿಭೀ—ಪರಮಾನುಗ್ರಹ.

ರಾಮ—ವಿಭೀಷಣಾ! ನಿನ್ನ ಬರುವಿಕೆಯಿಂದಲೇ ನಮ್ಮ ಕಾರ್ಯವು ಕೈಗೂಡಿತು. ಆದರೆ ಸಮುದ್ರವನ್ನು ದಾಟುವುದರಲ್ಲಿ ಮಾತ್ರ ಉಪಾಯವು ತೋರದಿರುವುದಲ್ಲಾ!

ವಿಭೀ—ದೇವಾ! ಇಲ್ಲಿ ತೋರತಕ್ಕದ್ದೇನಿರುವುದು? ದಾರಿಯನ್ನು ತೋರದಿದ್ದರೆ ಸ್ವಾಮಿಯು ಸಮುದ್ರನಮೇಲೆ ದಿವ್ಯಾಸ್ತ್ರವನ್ನು ಪ್ರಯೋಗಿಸಬಹುದಷ್ಟೇ!

ರಾಮ—ವಿಭೀಷಣಾ ಭಲೆ! ಭಲೆ! ಇರಲಿ. ಹೀಗೆಯೇ ಮಾಡುವೆನು. ( ಥಟ್ಟನೆ ಎದ್ದು, ರೋಷದಿಂದ )

ಬೇಗನೆ ನನಗೆ ಹಾದಿಯನ್ನು ಕೊಡದಿದ್ದರೆ ನನ್ನ ಬಾಣದಿಂದ ನೀರನ್ನು ಶೋಷಿಸಿ, ಕೆಸರನ್ನು ಒಣಗಿಸಿ, ಜಲಚರಗಳೆಲ್ಲವೂ ಸತ್ತು, ನೆಲದ ಮೇಲೆ ಬಿದ್ದು, ಅಲೆಗಳ ಸದ್ದು, ಅಣಗುವಂತೆ ಬೇಗನೆ ಮಾಡುವೆನು.

ವರುಣ—( ಪ್ರವೇಶಿಸಿ ಸಂಭ್ರಮದಿಂದ ) ದೇವಕಾರ್ಯ ಸಾಧನಾರ್ಥವಾಗಿ ನರರೂಪವನ್ನು ತಳೆದ ನಾರಾಯಣನ ರಾಕ್ಷಸಾಂತಕವಾದ ಬಾಣದಿಂದ ಹೆದರಿರುವೆನು. ಆತನನ್ನೇ ಮೊರೆಹುಗುವೆನು. ( ನೋಡಿ ) ಓಹೋ ! ಈತನೇ ಭಗವಂತನು.

ಶಂಖಚಕ್ರ ಗದಾಧಾರಿಯಾದ ಭಗವಂತನು ತಾನೇ ಸಕಲ ಪ್ರಪಂಚಕ್ಕೂ ಕಾರಣಭೂತನೆನಿಸಿದ್ದರೂ, ಮಾನುಷರೂಪವನ್ನು ತಳೆದು ಈಗ ಕಾರ್ಯಾರ್ಥಿಯಾಗಿ ಬಂದಿರುವನು. ತ್ರೈಲೋಕ್ಯಕಾರಣನೆನಿಸಿದ ನಾರಾಯಣನೆ! ವಂದಿಸುವೆನು

ಲಕ್ಷ್ಮಣ—( ನೋಡಿ ) ಓಹೋ! ಇವನಾರು ?

ರತ್ನಕಿರೀಟವನ್ನು ಧರಿಸಿ, ಅರಳಿದ ತಾವರೆಯಂತಿರುವ ಕಣ್ಣುಗಳಿಂದ ಕೂಡಿ, ಅರೆಬಿರಿದ ನೈದಿಲೆಯನ್ನು ಹೋಲುವ ದೇಹಕಾಂತಿಯುಕ್ತನೆನಿಸಿ, ಮದ್ದಾನೆಯ ಲೀಲೆಯನ್ನು ತಳೆದು ಜಲರಾಶಿಯ ಮಧ್ಯದಿಂದ ಎದ್ದು ಬರುತ್ತಿರುವನು! ತೇಜಸ್ಸಿನಿಂದ ಜೀವಲೋಕವನ್ನೆಲ್ಲಾ ತಲೆಬಾಗುವಂತೆ ಮಾಡುತ್ತಿರುವನು !

ವಿಭೀ—ದೇವಾ! ಭಗವಂತನಾದ ವರುಣನು ಬಂದಿರುವನು.

ರಾಮ—ಏನು ? ಈತನು ವರುಣನೆ ? ಭಗವನ್! ವರುಣ! ನಮಸ್ಕಾರವು.

ವರುಣ—ದೇವಸಾರ್ವಭೌಮನು ನನಗೆ ನಮಸ್ಕಾರ ಮಾಡಬಾರದು. ಅಥವಾ,

ರಾಜಪುತ್ರಾ! ಕೋಪಕ್ಕೆ ಕಾರಣವೇನು ? ನಾನು ರೋಷದಲ್ಲಿ ನಿನಗೆ ಸಾಟಿಯೆ ? ನರೋತ್ತಮಾ! ಕರ್ತವ್ಯವೇನೆಂಬುದನ್ನು ಬೇಗನೆ ಹೇಳು.

ರಾಮ—ಲಂಕಾಗಮನಾರ್ಥವಾಗಿ ನೀನು ಹಾದಿಯನ್ನು ಕೊಡಬಲ್ಲೆಯಷ್ಟೆ!

ವರುಣ—ಇದೋ ಮಾರ್ಗವು. ನೀನು ಪ್ರಯಾಣಮಾಡಬಹುದು ( ಎಂದು ಕಣ್ಮರೆಯಾಗುವನು )

ರಾಮ—ಏನಿದು? ಭಗವಂತನಾದ ವರುಣನು ಅಂತರ್ಹಿತನಾದನು. ವಿಭೀಷಣಾ! ನೋಡು, ನೋಡು. ಭಗವಂತನಾದ ವರುಣನ ಅನುಗ್ರಹ ದಿಂದ ಅಲುಗದಿರುವ ತೆರೆಗಳುಳ್ಳ ಸಾಗರವನ್ನು ನೋಡು.

ವಿಭೀ—ದೇವಾ! ಜಲನಿಧಿಯು ಈಗ ಎರಡು ಭಾಗವಾದಂತಿದೆ.

ರಾಮ—ಹನೂಮಂತನೆಲ್ಲಿ?

ಹನೂ—ಸ್ವಾಮಿಗೆ ಮಂಗಳವಾಗಲಿ.

ರಾಮ—ಹನೂಮನ್! ಮುಂದೆ ನಡೆ.

ಹನೂ—ಸ್ವಾಮಿಯ ಅಪ್ಪಣೆ (ಎಲ್ಲರೂ ನಡೆತರುವರು)

ರಾಮ—(ಆಶ್ಚರ್ಯದಿಂದ ನೋಡಿ) ವತ್ಸ ಲಕ್ಷ್ಮಣಾ! ಮಿತ್ರ ವಿಭೀಷಣಾ! ಮಹಾರಾಜ ಸುಗ್ರೀವಾ! ಸಖೆ ಹನೂಮನ್! ನೋಡಿರಿ. ಸಾಗರದ ಸೊಬಗನ್ನು ನೋಡಿರಿ. ಇಲ್ಲಿ ನೊರೆಯು ಉಕ್ಕುತ್ತಿರುವುದು. ಇತ್ತ ನೀರೆಲ್ಲವೂ ಮೀನಮಯವಾಗಿರುವುದು. ಇಲ್ಲಿ ಶಂಖಗಳೇ ತುಂಬಿರುವವು. ಈಕಡೆ ಕಾರ್ಮುಗಿಲಿನಂತೆ ಕಾಣುವುದು ಇಲ್ಲಿ ಅಲೆಗಳು ಮಾತ್ರವೇ ಇರುವುವು. ಈ ಪ್ರದೇಶವು ನೊಸಳೆಗಳಿಂದ ಭಯಂಕರವಾಗಿರುವುದು ಈ ದಿಕ್ಕಿನಲ್ಲಿ ಸುಳಿಗಳು ಭೀಕರಗಳೆನಿಸಿರುವುವು. ಇಲ್ಲಿ ಜಲವು ಕಟ್ಟಿ ಕದಲದಿರುವುದು.

ಭಗವಂತನ ಅನುಗ್ರಹದಿಂದ ಸಾಗರವನ್ನು ದಾಟಿದೆವು.

ಹನೂ—ದೇವಾ! ಇದೇ, ಇದೇ ಲಂಕೆಯು.

ರಾಮ—(ಬಹಳ ಕಾಲನೋಡಿ) ಅಯ್ಯೋ! ರಾಕ್ಷಸ ರಾಜಧಾನಿಯ ಸೊಬಗು ಬೇಗನೆ ಹಾಳಾಗುವುದಲ್ಲಾ!

ನನ್ನ ಬಾಣವಾಯುವಿನಿಂದ ಭಗ್ನವಾಗಿ, ಕಪಿವರ ಸೈನ್ಯತರಂಗಗಳಿಂದ ಪೆಟ್ಟುತಿಂದು; ರಾವಣನೆಂಬ ಅಂಬಿಗನ ದೋಷದಿಂದ, ಜಲಮಧ್ಯಗತವಾದ ಈ ಲಂಕಾ ನೌಕೆಯು ಹಾಳಾಗುವುದಲ್ಲಾ!

ಸುಗ್ರೀವಾ! ಈ ಸುವೇಲ ಪರ್ವತದಲ್ಲಿ ಶಿಬಿರವನ್ನು ಏರ್ಪಡಿಸು (ಎಂದು ಕುಳಿತುಕೊಳ್ಳುವನು)

ಸುಗ್ರೀವ—ಸ್ವಾಮಿಯ ಅಪ್ಪಣೆ. ನೀಲಾ! ಹೀಗೆಯೇ ಮಾಡು.

ನೀಲ—(ಪ್ರವೇಶಿಸಿ) ಮಹಾರಾಜನ ಅಪ್ಪಣೆ (ಎಂದು ಹೊರಬಂದು ಮರಳಿಹೊಕ್ಕು) ದೇವಾ! ಪರಾಕು ಸೇನೆಯನ್ನು ಕ್ರಮವಾಗಿ

ನಿಲ್ಲಿಸಿ, ಗುಂಪುಗುಂಪಾಗಿ ಪರೀಕ್ಷಿಸುವ ಸಂದರ್ಭದಲ್ಲಿ ಯಾವುದೊಂದು ಪುಸ್ತಕದಲ್ಲಿಯೂ ಗೊತ್ತಿಲ್ಲದಿರುವ ಇಬ್ಬರು ವಾನರರನ್ನು ಹಿಡಿದಿರುವೆವು. ಕರ್ತವ್ಯವೇನೆಂದು ನಮಗೆ ತಿಳಿಯದು. ಸ್ವಾಮಿಯ ಚಿತ್ತ.

ರಾಮ—ಬೇಗನೆ ಕರತರಹೇಳು.

ನೀಲ—ಸ್ವಾಮಿಯ ಅಪ್ಪಣೆ ( ಎಂದು ಹೊರಟು ಬರುವನು )

( ಬಳಿಕ ವಾನರರೂಪಿಗಳಾದ ಶುಕ-ಸಾರಣರನ್ನು ಹಿಡಿದುಕೊಂಡು ವಾನರರು ಪ್ರವೇಶಿಸುವರು )

ವಾನರರು—ಎಲೋ! ಹೇಳಿರಿ. ನೀವಿಬ್ಬರೂ ಯಾರು ? ಹೇಳಿರಿ.

ಇಬ್ಬರೂ—ಭರ್ತನೇ! ನಾವಿಬ್ಬರೂ ಆರ್ಯ ಕುಮುದನ ಸೇವಕರು

ವಾನರರು—ದೇವಾ! ಆರ್ಯಕುಮುದನ ಸೇವಕರೆಂಬುದು ಮೋಸ.

ವಿಭೀ—( ಶುಕ-ಸಾರಣರನ್ನು ಸಾವಧಾನದಿಂದ ನೋಡಿ )

ಇವರಿಬ್ಬರೂ ನಮ್ಮ ಸೇವಕರೂ ಅಲ್ಲ. ಕಪಿಗಳೂ ಅಲ್ಲ. ರಾವಣ ನಿಂದ ಪ್ರೇರಿತರಾಗಿ ಬಂದಿರುವ ಶುಕ, ಸಾರಣರೆಂಬ ರಾಕ್ಷಸರು.

ಇಬ್ಬರೂ—( ಸ್ವಗತಂ ) ಅಯ್ಯೋ! ಕುಮಾರನು ಗುರುತಿಸಿ ಬಿಟ್ಟನು. ( ಪ್ರಕಾಶಂ ) ಆರ್ಯಾ! ರಾಕ್ಷಸರಾಜನ ವಿಪ್ರತಿಪತ್ತಿಯಿಂದ ಹಾಳಾಗುವ ರಾಕ್ಷಸಕುಲವನ್ನು ಕಂಡು ಮನಮರುಗಿ, ಎಲ್ಲಿಯೂ ಎಡೆ ಇಲ್ಲದೆ, ಆರ್ಯನನ್ನು ಸೇರಬೇಕೆಂಬ ಉದ್ದೇಶದಿಂದ ಕಪಿರೂಪವನ್ನು ತಳೆದು ಬಂದಿರುವವು.

ರಾಮ—ಮಿತ್ರಾ ವಿಭೀಷಣಾ! ನಿನಗೆ ಹೇಗೆ ತೋರುವುದು ?

ವಿಭೀ—ರಾಜದೇವಾ! ಇವರಿಬ್ಬರೂ ರಾಕ್ಷಸೇಂದ್ರನ ಆಪ್ತಮಂತ್ರಿಗಳು. ಪ್ರಾಣಾಂತಿಕವಾದ ವ್ಯಸನವು ಬಂದರೂ ಲಂಕೇಶನನ್ನು ಬಿಡತಕ್ಕವರೇ ಅಲ್ಲ.

ಆದುದರಿಂದ ಸ್ವಾಮಿಯು ತಕ್ಕ ಶಿಕ್ಷೆಯನ್ನು ಆಜ್ಞಾಪಿಸಬೇಕು.

ರಾಮ—ವಿಭೀಷಣಾ! ಬೇಡ. ಹಾಗೆ ಹೇಳಬೇಡ.

ಇವರಿಬ್ಬರನ್ನು ಶಾಸನಮಾಡಿದ ಮಾತ್ರದಿಂದಲೇ ನನಗಾಗುವ ವೃದ್ಧಿಯಾವರೂ ಯಾವುದು? ರಾಕ್ಷಸೇಂದ್ರನಿಗೆ ನಾಶವುಂಟಾನೇ ಏನು? ಇವರಿಬ್ಬರನ್ನೂ ಬಿಟ್ಟುಬಿಡು.

ಲಕ್ಷ್ಮ—ಬಿಟ್ಟ ಪಕ್ಷದಲ್ಲಿ ಶಿಬಿರವನ್ನು ಕೊಳ್ಳು, ಚೆನ್ನಾಗಿ ಪರೀಕ್ಷಿಸಿ ಮರಳಿ ಬಿಡುಗಡೆಗೆ ಆರ್ಯನು ಅಪ್ಪಣೆ ಮಾಡಬಹುದು.

ರಾಮ—ಲಕ್ಷ್ಮಣನ ಮಾತು ಯುಕ್ತವಾಗಿರುವುದು. ನೀಲಾ! ಹಾಗೆಯೇ ಮಾಡು.

ನೀಲ—ಸ್ವಾಮಿಯ ಅಪ್ಪಣೆ.

ರಾಮ—ಅಥವಾ ಇತ್ತ ಬಾ.

ಇಬ್ಬರೂ—ಸಿದ್ಧವಾಗಿರುವೆವು.

ರಾಮ—ನಾನು ಹೇಳಿದೆನೆಂದು ಆ ರಾಕ್ಷಸೇಂದ್ರನಿಗೆ ತಿಳಿಸಿ. ನನ್ನ ಮಡದಿಯನ್ನು ಕದ್ದುತಂದು ನೀನೇ ಜಗಳವನ್ನು ಹೂಡಿದೆಯಾಗಿ ರಣಾತಿಥಿಯಾಗಿ ಬಂದಿರುವೆನಲ್ಲದೆ ನಿನ್ನನ್ನು ನೋಡುವ ಸಲುವಾಗಿ ಬರಲಿಲ್ಲ" ಎಂದು.

ಇಬ್ಬರೂ—ಮಹಾರಾಜನ ಅಪ್ಪಣೆ (ಎಂದು ತೆರಳುವರು)

ರಾಮ—ವಿಭೀಷಣಾ! ನಾವೂ ಸೇನೆಯನ್ನು ಪರೀಕ್ಷಿಸುವ!

ವಿಭೀ—ಸ್ವಾಮಿಯ ಚಿತ್ತ.

ರಾಮ—(ನಡೆತಂದು ನೋಡಿ) ಓಹೊ! ಸೂರ್ಯದೇವನು ಮುಳುಗುತ್ತಿರುವನು ಈಗ.

ಅಸ್ತಪರ್ವತದ ತುದಿಯನ್ನು ಸೇರಿ, ಕಿರಣಗಳನ್ನೆಲ್ಲಾ ಕುಗ್ಗಿಸಿ, ಸಂಧ್ಯೆಯಿಂದ ಮಾರ್ಪೊಳಿಸಿದ ದೇಹವುಳ್ಳ ಸೂರ್ಯನು, ರಕ್ತವಸ್ತ್ರವನ್ನು ಹೊದಿಸಿದ ಆನೆಯ ಕುಂಭಸ್ಥಲದಲ್ಲಿ ಅಪರಂಜಿಯ ಫುಲಕದಂತೆ ಕಂಗೊಳಿಸುವನು.

(ಎಂದೆಲ್ಲರೂ ಹೊರಡುವರು)

**ನಾಲ್ಕನೆಯ ಅಂಕವು ಮುಗಿದುದು.**

---

## ಐದನೆಯ ಅಂಕ

( ರಾಕ್ಷಸ ಕಂಚುಕಿಯ ಪ್ರವೇಶ )

ರಾ. ಕಂ.—ಯಾರಲ್ಲಿ ? ಹವಳದ ತೊಟ್ಟಿಯ ಬಾಗಿಲಿನ ಕಾವಲುಗಾರರು ?

( ಮತ್ತೊಬ್ಬ ರಾಕ್ಷಸ ಪ್ರವೇಶಿಸಿ )

ರಾಕ್ಷಸ—ಆರ್ಯಾ ! ನಾನು. ಕಾರ್ಯವೇನು ?

ರಾ. ಕಂ.—ಹೋಗು. ಮಹಾರಾಜನ ಶಾಸನದಂತೆ ವಿದ್ಯುಜ್ಜಿಹ್ವನನ್ನು ಬರಹೇಳು.

ರಾಕ್ಷಸ—ಆರ್ಯನೆ ! ಅಪ್ಪಣೆ ( ಎಂದು ತೆರಳುವನು. )

ರಾ. ಕಂ.—ರಾಕ್ಷಸ ಕುಲಸಮೃದ್ಧಿಯು ಹಾಳಾಯಿತು. ಸಾಧನಗಳೆಲ್ಲವೂ ನಾಶವಾದುವು. ವೀರಪುರುಷರೆಲ್ಲರೂ ಹತರಾದರು. ತನ್ನ ಪ್ರಾಣವು ಉಳಿಯುವುದೇ ಸಂಶಯ. ಇನ್ನೂ ನಮ್ಮ ಮಹಾರಾಜನ ಬುದ್ಧಿಯು ಪ್ರಸನ್ನವಾಗದಿರುವುದಲ್ಲಾ ! ಯಾವನು ತಾನೇ ಚಂಚಲವಾದ ತರಂಗಪಂಕ್ತಿಯು ದಡವಿಾರಿ ಹರಿದು, ಮಿಾನು ಮೊಸಳೆಗಳಿಂದ ತುಂಬಿದ ಸಮುದ್ರವನ್ನು ದಾಟಿ ಬಂದುದನ್ನು ಕಂಡು ಕಾಂತೆಯನ್ನು ಪ್ರತ್ಯರ್ಪಣಮಾಡುವ ಮೂಲಕ ಆತನಿಗೆ ಶಾಂತಿಯನ್ನು ಮಾಡದಿರುವನೇ ?

ಮತ್ತು ಪ್ರಹಸ್ತನೇ ಮೊದಲಾದ ವೀರರೆಲ್ಲರೂ ಮಡಿದರು. ಕುಂಭಕರ್ಣಾದಿಗಳು ಹತರಾದರು. ಇಂದ್ರಜಿತ್ತು ಕೂಡ ಈಗ ರಾಮನಿಂದ ಸಂಹೃತನಾದನು.

ಇಂತಿದ್ದರೂ ಮದನಪರವಶನಾಗಿ, ಮಂತ್ರಿವಾಕ್ಯವನ್ನೂ ಲೆಕ್ಕಿಸದೆ, ಮಹಾಸಿಂಹಿಕನಂತೆ ವೀರಮಾನಿಯಾದ ನಮ್ಮ ಅರಸನು ಯುದ್ಧಮಾಡಲೇಬೇಕೆಂಬ ಹಟದಿಂದ ರಘುಪುಂಗವನ ಪಟ್ಟದರಸಿಯನ್ನು ಕೊಡದಿರುವನಲ್ಲಾ !

ವಿದ್ಯುಜ್ಜಿಹ್ವ—( ಪ್ರವೇಶಿಸಿ ) ಆರ್ಯಾ ! ಸೌಖ್ಯವಷ್ಟೆ ?

ರಾ. ಕಂ.—ವಿದ್ಯುಜ್ಜಿಹ್ವಾ ! ಮಹಾರಾಜನ ಆಜ್ಞಾನುಸಾರ ರಾಮಲಕ್ಷ್ಮಣರ ಶಿರಃಪ್ರತಿಕೃತಿಯನ್ನು ತೆಗೆದುಕೊಂಡು ಬಾ. ಹೋಗು.

ವಿದ್ಯು—ಮಹಾರಾಜನ ಅಪ್ಪಣೆ. ( ಎಂದು ತೆರಳುವನು. )

ರಾ. ಕಂ—ನಾನೂ ಮಹಾರಾಜನ ಪಾದಮೂಲವನ್ನೇ ಸೇರುವೆನು.

( ತೆರಳುವನು )

ಇಂತು ವಿಷ್ಕಂಭಕವು

——:o:——

( ರಾಕ್ಷಸೀಗಣ ಪರಿವೃತೆಯಾದ ಸೀತೆಯ ಪ್ರವೇಶ )

ಸೀತೆ—ಆರ್ಯಪುತ್ರನ ಆಗಮನದಿಂದ ಪ್ರಸನ್ನವಾಗಿದ್ದ ನನ್ನ ಹೃದಯವು ಇಂದು ಏತರ ಸಲುವಾಗಿಯೋ ಉದ್ವಿಗ್ನವಾಗಿರುವುದು. ಅಪಶಕುನಗಳು ತಲೆದೋರುತ್ತಿವೆ. ಇಂತಿದ್ದರೂ ಮನಸ್ಸಿಗೆ ಹೆಚ್ಚಿನ ಅಭ್ಯುದಯವು ಹೊಳೆಯುವುದು. ಸರ್ವವಿಧದಿಂದಲೂ ಭಗವಂತನು ಶಾಂತಿಯನ್ನು ಅನುಗ್ರಹಿಸಲಿ!

( ರಾವಣನ ಪ್ರವೇಶ. )

ರಾವಣ—ಹಿಂದೆ ನಾನು ಕುಬೇರನನ್ನು ಗೆದ್ದು ಸ್ವಾಧೀನಪಡಿಸಿಕೊಂಡಿದ್ದ, ಅರೆಬಿರಿದ ತಾವರೆಯನ್ನು ಕಯ್ಯಲ್ಲಿಪಿಡಿದ ರಾಜಲಕ್ಷ್ಮಿಯು ಈಗ ನನ್ನ ಮನೆಯನ್ನು ಬಿಟ್ಟು ಹೊರಟು ಹೋದಳು. ಎಲೌ ಮಾನ್ಯೆಯೆ! ನಿಲ್ಲು, ನಿಲ್ಲು. ಬೇಡ ಹೋಗಬಾರದು. ಏನೆಂದು ಹೇಳುವೆ? " ನಿನ್ನನ್ನು ಬಿಟ್ಟು ರಾಮನನ್ನು ಸೇರುವೆನು " ಎಂತಲೊ? ಆಃ ಹಾಳಾಗಿ ಹೋಗು. ಕುಬೇರನಮನೆಯಲ್ಲಿಯೂ ಬಲಾತ್ಕಾರದಿಂದಲೇ ಹಿಡಿತಂದೆನು. ಈಗಲೂ ರಾಘವನನ್ನು ರಣದಲ್ಲಿ ಕೊಂದು ಬಲಾತ್ಕಾರದಿಂದಲೇ ಹಿಡಿತರುವೆನು.

ಇವಳಿಂದ ಫಲವೇನು? ಸೀತೆಯನ್ನೇ ಲೋಭಗೊಳಿಸುವೆನು. (ಮದನಬಾಧೆಯನ್ನು ನಿರೂಪಿಸಿ ) ಆಹಾ! ಪುಷ್ಪಬಾಣನ ಪರಾಕ್ರಮವು ಅಸದಳವಾದುದು. ಏಕೆಂದರೆ:—ಸೀತೆಯ ಮೋರೆಯನ್ನು ಕಂಡ ಕಣ್ಣುಗಳು ರಾತ್ರಿವೇಳೆಯಲ್ಲಿ ನಿದ್ದೆಯನ್ನು ಮರೆತಿರುತ್ತವೆ. ಆಕೆಯ ಅಂಗಸಂಗವನ್ನು ಬಯಸಿದ ದೇಹವು ಕೃಶವಾಗಿ ಬಿಳುಪೇರಿರುವುದು ರಮಣೀಯ ಪದಾರ್ಥಗಳೂ ಸಂತಾಪವನ್ನುಂಟುಮಾಡುತ್ತಿವೆ ಮೂರು ಲೋಕಗಳನ್ನೂ ಗೆದ್ದ ಭುಜಬಲಸಂಪನ್ನನಾದ ರಾವಣನು ಮನ್ಮಥನ ಮೂಲಕ ಸೋತು ಹೋದನು. ಕಷ್ಟ!

( ಬಳಿಸಾರ್ದು )

ಸೀತೆ! ಕಮಲಲೋಚನೆ! ಹೃದಯೇಶ್ವರಿ! ಮಾನುಷಗತವಾದ ನಿನ್ನ ಚಿತ್ತವೃತ್ತಿಯನ್ನು ಬಿಡು. ಇಂದಿನ ಯುದ್ಧದಲ್ಲಿ ನನ್ನ ಶಸ್ತ್ರದಿಂದ

ಲಕ್ಷ್ಮಣನೊಂದಿಗೆ ನಿನ್ನ ಪ್ರಾಣಕಾಂತನು ಉರುಳಬೀಳುವುದನ್ನೇ ನೋಡು ವಿಯಂತೆ.

ಸೀತೆ---ಛೀ ! ಛೀ ! ಮಂದರಗಿರಿಯನ್ನು ಕೈಯಿಂದ ತೂಕ ಮಾಡ ಲೆಳಸಿದ ನೀಚಾ ! ರಾವಣಾ ! ಬುದ್ಧಿಶೂನ್ಯಾ ! ಛೀ !

ರಾಕ್ಷಸ—ಮಹಾರಾಜನು ಜಯಶೀಲನಾಗಲಿ. ಇವೆರಡೂ ರಾಜ ಪುತ್ರರಾದ ಆ ಮನುಷ್ಯರ ತಲೆಗಳು. ನಿನ್ನ ಹಿತವನ್ನು ಬಯಸಿದ ಕುಮಾ ರನು ಅವರನ್ನು ಕೊಂದು ತಂದಿರುವನು.

ರಾವಣ—ಸೀತೆ ! ನೋಡು. ನೋಡು. ಆ ಇಬ್ಬರು ಮನುಷ್ಯರ ತಲೆಗಳನ್ನು.

ಸೀತೆ—ಹಾ ! ಆರ್ಯಪುತ್ರಾ ! ( ಮೂರ್ಛೆ ಬೀಳುವಳು)

ರಾವಣ—ಸೀತೆ ! ಆಮನುಷ್ಯಹೀನನಾದ ಇವನಲ್ಲಿ ಭಾವವನ್ನು ತೊ ರೆ. ಹೇ ವಿಶಾಲಾಕ್ಷಿ ! ಈಗಲೇ ಮಹತ್ತರವಾದ ಸಂಪತ್ತನ್ನು ಪಡೆಯುವೆ.

ಸೀತೆ—( ಚೇತರಿಸಿಕೊಂಡು )ಹಾ ! ಆರ್ಯಪುತ್ರ ! ಕಣ್ಣಾಗುಡ್ಡೆಗ ಳು ಬಿಳುಸಾಗಿ, ಪರಿಮಳವನ್ನು ಬೀರುವ ನವಕಮಲಸದೃಶವಾದ ಮುಖ ಗಳನ್ನು ನೋಡುತ್ತಿರುವ ಭಾಗ್ಯಹೀನೆಯಾದ ನನ್ನ ಧೈರ್ಯವು ಎಷ್ಟರವು ಟ್ಟಿನದೋ ಕಾಣೆ ! ಹಾ ! ಆರ್ಯಪುತ್ರ ! ಈ ದುಃಖ ಸಾಗರದಲ್ಲಿ ನನ್ನನ್ನು ಕೆಡಹಿ ಎಲ್ಲಿ ತೆರಳಿದೆ ? ನಾನಿನ್ನೂ ಸಾಯಲಿಲ್ಲವಲ್ಲಾ ! ( ಸ್ವಲ್ಪಯೋಚಿಸಿ ) ಒಂದು ವೇಳೆ ಇದು ಕೃತ್ರಿಮವಾಗಿರಬಹುದೇ ? ಭದ್ರಮುಖ ! ಆರ್ಯಪು ತ್ರನನ್ನು ಕೊಂದ ಖಡ್ಗದಿಂದಲೇ ನನ್ನನ್ನೂ ಕೊಂದುಬಿಡು.

ರಾವಣ—ದಿಟ ! ಯುದ್ಧದಲ್ಲಿ ಇಂದ್ರಜಿತನು ಅನುಜನಾದ ಲಕ್ಷ್ಮಣ ನೊಂದಿಗೆ ಆ ನರಾಧಮನನ್ನು ಕೊಂದ ಬಳಿಕ ನಿನ್ನನ್ನು ಬಿಡಿಸುವರಾದರೂ ಯಾರು ?

( ತೆರೆಯಲ್ಲಿ )

ರಾಮನು. ರಾಮನು.

ಸೀತೆ—ಚಿರಂಜೀವಿಯಾಗು.

ರಾಕ್ಷಸ—( ಸಂಭ್ರಮದಿಂದ ಪ್ರವೇಶಿಸಿ )ರಾಮನು—ರಾಮನು—

ಸೀತೆ—ರಾಮನೇ ! ಸುಖವಾಗಿ ದೀರ್ಘಕಾಲ ಬದುಕಿರು.

ರಾವಣ—ಹೇಗೆ ? ಏನು ? ರಾಮನೇ ?

ರಾಕ್ಷಸ—ಮಹಾರಾಜನೇ ! ಪ್ರಸನ್ನನಾಗು. ಪ್ರಸನ್ನನಾಗು. ಕೈ

ವಿಸ್ತಾರಿ ನಡೆದ ಸಮಾಚಾರವನ್ನು ಅರಿಕೆಮಾಡುವ ಸಂಭ್ರಮದಲ್ಲಿ ಹಿಂದು ಮುಂದು ನೋಡಲಿಲ್ಲ. ಮನ್ನಿಸು.

ರಾವಣ—ಹೇಳು. ಬೇಗ ಹೇಳು. ಆ ತಾಪಸ ಮನುಷ್ಯನು ಏನು ಮಾಡಿದನು?

ರಾಕ್ಷಸ—ಮಹಾರಾಜನೇ! ಆಲಿಸು. ಆತನು—ಮಹಾಬಲಶಾಲಿಯಾದ ಕ್ರೋಧಿತ ಆ ರಾಘವನು ಲಕ್ಷ್ಮಣನೊಡಗೂಡಿ ಈಗ ಯುದ್ಧದಲ್ಲಿ ಮೇಲೆ ಬಿದ್ದು ನಿನ್ನ ಮಗನನ್ನು ಕೊಂದನು.

ರಾವಣ—ಆ! ದುರುಳಾ! ದಿಗಾವೇದಿ! ಇಂದ್ರಾದಿದೇವತೆಗಳನ್ನು ಕೊಂದು, ದೈತ್ಯರನ್ನು ಓಂದಟ್ಟಿದ ಇಂದ್ರಜಿತನನ್ನು ಯುದ್ಧದಲ್ಲಿ ಮನುಷ್ಯನೂ ಕೊಲ್ಲುವನೊ?

ರಾಕ್ಷಸ—ಮಹಾರಾಜನೇ! ಸೈರಿಸು, ಸೈರಿಸು. ಮಹಾರಾಜನ ಪಾದ ಮೂಲದಲ್ಲಿ ಕುಮಾರನ ವಿಷಯವಾಗಿಯೇ ಸುಳ್ಳು ಮಾತು!

ರಾವಣ—ಹಾ ವತ್ಸಾ! ಮೇಘನಾದಾ! (ಎಂದು ಮೋಹಗೊಂಡು ಬೀಳುವನು)

ರಾಕ್ಷಸ—ಮಹಾರಾಜನೇ! ಸೈರಿಸು, ಸೈರಿಸು.

ರಾವಣ—(ತಿಳಿದೆದ್ದು)

ಹಾ ವತ್ಸಾ! ಲೋಕಭೀಕರಾ! ಅಸ್ತ್ರನಿಪುಣಾ! ಹಾ ತರಳಾ! ಇಂದ್ರಜೇತಾ! ಅವನತ ವೈರಿಮಂಡಲ! ಕುಮಾರ! ವೀರ! ಗುರುವತ್ಸಲ! ಯುದ್ಧದುರ್ಮದ! ಹಾ ಪುತ್ರ! ನನ್ನನ್ನು ಇಲ್ಲಿಯೇ ಬಿಟ್ಟು ನೀನೇಕೆ ಹೊರಟೆ? (ಎಂದು ಮರಳಿ ಮೋಹಗೊಳ್ಳುವನು)

ರಾಕ್ಷಸ—ಛೀ! ಛೀ! ಹಾಳು ವಿಧಿಯು ತ್ರೈಲೋಕ್ಯವಿಜಯಿಯಾದ ರಾವಣನಿಗೂ ಇಂತಹ ದುರವಸ್ಥೆಯನ್ನು ತಂದೊಡ್ಡಿದನಲ್ಲಾ. ಮಹಾರಾಜನೇ, ಸುತ್ತೈಸಿಕೊಳ್ಳು, ಸೈರಿಸು.

ರಾವಣ—(ತಿಳಿದೆದ್ದು) ಈಗ ಇಷ್ಟೊಂದು ಅನರ್ಥಕ್ಕೂ ಕಾರಣವಾದ ಈ ಸೀತೆಯಿಂದ ತಾನೇ ಫಲವೇನು? ತ್ರೈಲೋಕ್ಯವನ್ನು ಗೆದ್ದಿದ್ದರೂ ವ್ಯರ್ಥವಾದ ಈ ಚಂಚಲವಾದ ಸಂಪತ್ತಿನಿಂದ ತಾನೇ ಫಲವೇನು? ಎಲೈ ಕೃತಾಂತಪತಕಾ, ಇನ್ನೂ ಅಂಜಿಕೆ ಪಡುವೆಯಾ? ವತ್ಸನಾದ ಇಂದ್ರಜಿತ್ತನ್ನು ತೊರೆದು ಸ್ನೇಹಶೂನ್ಯನೂ ಕಠೋರಚಿತ್ತನೂ ಆದ ಈ ದಶಾನನು ಇನ್ನೂ ಬದುಕಿರುವನಲ್ಲಾ! ಕಷ್ಟ! (ಎಂದು ಸಂತಾಪದಿಂದ ಬೀಳುವನು).

ರಾಕ್ಷಸ— ಎಲೈ, ರಾಕ್ಷಸವೀರರೇ ರಾಜನು ಈ ಸ್ಥಿತಿಯಲ್ಲಿರುವನಾದುದರಿಂದ ಒಳಕೋಟೆಗಳಲ್ಲಿ ಸದರಿ ಇರುವ ನೀವೆಲ್ಲರೂ ಜಾಗರೂಕತೆಯಿಂದಿರಬೇಕು.

( ತೆರೆಯಲ್ಲಿ )

ಎಲೈ ರಜನೀಚರಶೂರರೇ ರಣಮುಖದಲ್ಲಿ ಮಡಿದ ಪ್ರಹಸ್ತ, ನಿಕುಂಭ, ಕುಂಭಕರ್ಣ, ಮೇಘನಾದ ಮುಂತಾದವರ ಜೆಂಬಲವು ಕಡಿಮೆಯಾದುದರಿಂದ ಭಯಪಟ್ಟು ವಿಮುಖರಾಗದಿರಿ. ನಿರಂತರವೂ ದೇವಯುದ್ಧದಲ್ಲಿ ಗೆದ್ದು ಬಂದ ನೀವು ಸಕಲ ಲೋಕ ವಿಜಯ ವಿಖ್ಯಾತವಾದ ಇಪ್ಪತ್ತು ತೋಳುಗಳನ್ನು ತಳೆದ ಬಾಹುಬಲ ಸಂಪನ್ನನೂ ಒಡೆಯನೂ ಎನಿಸಿದ ಲಂಕೇಶ್ವರನು ಇಲ್ಲಿಯೇ ಇರುವಾಗ ಚಪಲವೃತ್ತಿಯನ್ನು ಕೈಕೊಂಡು ಓಡಿಹೋಗುವುದು ತರವಲ್ಲ.

ರಾವಣ—( ಕಿವಿಗೊಟ್ಟು ಕೇಳಿ, ರೋಷದಿಂದ )ಹೋಗು, ಮುಂದಿನ ಸಮಾಚಾರವನ್ನು ತಿಳಿದು ಬಾ.

ರಾಕ್ಷಸ—ಮಹಾರಾಜನ ಅಪ್ಪಣೆ( ಎಂದು ಹೊರಬಂದು ಮರಳಿ ಹೊಕ್ಕು )ಮಹಾರಾಜನಿಗೆ ಜಯವಾಗಲಿ, ಈ ರಾಮನು—ಕೆಚ್ಚಿನಿಂದ ನಿನ್ನನ್ನು ತಿರಸ್ಕರಿಸಿ ಬಿಲ್ಲಿನಲ್ಲಿ ಬಾಣವನ್ನು ತೊಡಿಸಿ ಮುಂದಹಾಸದಿಂದ ವಿಶಾಲನೇತ್ರಯುಕ್ತನೆನಿಸಿ, ರಣಮುಖದಲ್ಲಿ ನಿನ್ನ ಮಗನನ್ನು ಉರುಳಿಸಿ ಲಂಕೆಯನ್ನೇ ಸುಡಬೇಕೆಂದಿರುವನೋ ಎಂಬಂತೆ ಮುಂದೆ ಮುಂದೆ ಬರುತ್ತಿರುವನು

ರಾವಣ—( ಥಟ್ಟನೆ ಎದ್ದು )ಎಲ್ಲಿ ? ಅವನೆಲ್ಲಿ ? ( ಎಂದು ಖಡ್ಗವನ್ನು ಎತ್ತಿ )ಐರಾವತದ ಕುಂಭಸ್ಥಲವನ್ನೂ ಛೇದಿಸುವಷ್ಟು ಹರಿತವಾದ ಮೊನೆಯುಳ್ಳ, ನನ್ನ ಕೈಯಲ್ಲಿರುವ ಈ ಖಡ್ಗವು ನಿನ್ನನ್ನು ಸಿಟ್ಟಿಗೆ ಆಹುತಿಗೊಳಿಸುವುದು, ನೀಚಾ, ತಾಪಸಾಧಮಾ ! ಎಲ್ಲಿ ಹೋಗುವೆ ? ನಿಲ್ಲು, ನಿಲ್ಲು

ರಾಕ್ಷಸ—ಮಹಾರಾಜನೇ? ವಿಶೇಷವಾದ ಸಾಹಸದಿಂದ ಫಲವೇನು!

ಸೀತೆ—ನಿಷ್ಕಾರಣವಾಗಿ ಅನರ್ಹವಾದ ಅನಿಷ್ಟಕಾರ್ಯಗಳನ್ನು ಮಾಡಲೆಳಸಿದ ರಾವಣನು ಬೇಗ ಸಾಯುವನು.

ರಾವಣ—( ಸೀತೆಯನ್ನು ನೋಡಿ )ಇವಳ ಸಲುವಾಗಿ ಅನೇಕ ಮಂದಿ ನನ್ನ ಒಡಹುಟ್ಟಿದವರೂ, ಮಕ್ಕಳೂ, ಗೆಳೆಯರೂ ಹತರಾದರು. ಆದು

ದರಿಂದ ಹಗೆಯನ್ನೇ ಚಿತ್ತದಲ್ಲಿ ನನೆಯುತ್ತಿರುವ ಇವಳ ಹೃದಯವನ್ನು ಭೇದಿಸಿ, ಕರುಳುಗಳನ್ನೆಲ್ಲಾ ವೈಮೇಲೆ ಸಿಂಗರಿಸಿ, ಖಡ್ಗವೆಂಬ ಸಿಡಿಲಿನ ಪೆಟ್ಟಿನಿಂದ ಇಬ್ಬರು ಮನುಷ್ಯರೊಂದಿಗೆ ಸೇರಿದ ಆ ವಾನರ ಕುಲವನ್ನೇ ಧ್ವಂಸ ಮಾಡುವೆನು. ( ಖಡ್ಗವನ್ನು ಎತ್ತುವನು )

ರಾಕ್ಷಸ—ಮಹಾರಾಜನೇ, ಸೈರಿಸು, ಸೈರಿಸು. ಹಗೆಯ ಕೆಚ್ಚನ್ನು ಮುರಿಯುವುದು ಬಿಟ್ಟು ಈ ವ್ಯರ್ಥ ಪ್ರಯಾಸದಿಂದ ಫಲವೇನು ? ಸ್ತ್ರೀವಧೆಯು ಎಂತಹ ಸಮಯದಲ್ಲಿಯೂ ತಕ್ಕುದಲ್ಲ.

ರಾವಣ—ಹಾಗಾದರೆ ರಥವನ್ನು ತೆಗೆದುಕೊಂಡು ಬಾ.

ರಾಕ್ಷಸ—ಅಪ್ಪಣೆ ( ಎಂದು ಹೊರಟು ಬಂದು ಮರಳಿ ಹೊಕ್ಕು ) ಮಹಾರಾಜನೇ, ಜಯಶೀಲನಾಗು, ಇದು ರಥವು.

ರಾವಣ—( ರಥವನ್ನೇರಿ ) ಸೀತೆ ! ನನ್ನ ಬಿಲ್ಲಿನಿಂದ ಹೊರಟ ತೀಕ್ಷ್ಣಬಾಣಗಳಿಂದ ತೇಜೋಹೀನನೆನಿಸಿ, ದೇವತೆಗಳಿಂದ ಸುತ್ತುವರೆಯಲ್ಪಟ್ಟ ರಾಘವನನ್ನು ನೀನೀಗಲೇ ನೋಡುವೆ.

( ಎಂದು ಪರಿವಾರದೊಡನೆ ತೆರಳುವನು )

ಸೀತೆ—ದೇವಾ ! ನನ್ನ ಕುಲಮರ್ಯಾದೆಗೆ ತಕ್ಕ ನಡೆವಳಿಯಿಂದ ನಾನು ಆರ್ಯಪುತ್ರನನ್ನು ಅನುಸರಿಸುತ್ತಿರುವೆನಾದರೆ, ಆರ್ಯಪುತ್ರನಿಗೆ ಜಯವುಂಟಾಗಲಿ.

( ಎಂದು ತೆರಳುವನು )

ಐದನೆಯ ಅಂಕವು ಮುಗಿದುದು.

---

## ೬ನೇ ಅಂಕ.

( ಮೂರುಮಂದಿ ವಿದ್ಯಾಧರರ ಪ್ರವೇಶ )

ಮೂವರೂ—ನಾವು-ಅಯ್ಯಾ! ನಾವು

೧ನೆ—ಇಕ್ಷ್ವಾಕುವಂಶದ ವಿಪುಲವೂ ಉಜ್ವಲವೂ ಆದ ಪತಾಕೆಯಂತಿರುವ,

೨ ನೆ—ರಾವಣ ಸಂಹಾರಾರ್ಥನಾಗಿ ಉದ್ಯಮವನ್ನು ಕೈಕೊಂಡ ರಾಮನ,

೩ ನೆ—ಸಂಗ್ರಾಮವನ್ನು ನೋಡಬೇಕೆಂಬ ಕುತೂಹಲ ಪೂರ್ಣರಾದನಾವು,

ಮೂವರೂ—ಹಿಮವಂತನ ಶಿಖರದಿಂದ ಬೇಗನೆ ಬಂದಿರುವೆವು.

೧ ನೆ—ಚಿತ್ರಕಥಾ! ಈ ದೇವ, ದೇವರ್ಷಿ, ಸಿದ್ಧ, ವಿದ್ಯಾಧರರೇ ಮುಂತಾದವರು ಅಂತರಿಕ್ಷದಲ್ಲಿ ಎಡೆಇಲ್ಲದೆ ನೆರೆದಿರುವರು. ಅದರಿಂದ ನಾವು ಇವರ ಗುಂಪನ್ನೇ ಬಿಟ್ಟು ದೂರವಾಗಿ ರಾಮರಾವಣರ ಯುದ್ಧವನ್ನು ಏಕಾಂತವಾಗಿ ನೋಡುವ.

ಇಬ್ಬರೂ—ಒಳ್ಳೇಯದು.( ಅಂತೆಯೇ ಮಾಡುವರು )

೧ ನೆ—ಈ ಯುದ್ಧ ಭೂಮಿಯು ಭಯಂಕರವಾಗಿರುವುದು. ಇಲ್ಲಿ ರಾಕ್ಷಸರ ದೇಹಗಳೆಂಬ ಜಲಭರಿತವಾಗಿ, ಕಪಿವರರೆಂಬ ಅಲೆಗಳಿಂದಲೂ, ಖಡ್ಗಗಳೆಂಬ ಮೊಸಳೆಗಳಿಗಳಿಂದಲೂ ಕೂಡದ ಯುದ್ಧರಂಗವು ರಘುವರ ಚಂದ್ರನಿಂದ ಉಕ್ಕಿ ಸಮುದ್ರದಂತೆ ಮೆರೆಯುವವು.

೨ ನೆ—ಇದು ಹೀಗೆಯೇಸರಿ.

ಇವರು ಮರ, ಬೆಟ್ಟಗಳಿಂದ ತಲೆಯೊಡೆದವರು. ಇವರು ಮುಷ್ಟಿಪ್ರಹಾರದಿಂದ ಹತರಾದವರು. ಅತಿಬಲರಾದ ವಾನರ ಸೇನಾನಾಯಕರು ಕಿವಿ, ಬಾಲಗಳನ್ನು ನೆಟ್ಟಗೆ ನಿಕ್ಷಿಸಿ, ತುಟಿಗಳನ್ನು ಕಚ್ಚಿ. ಕ್ರೂರದೃಷ್ಟಿಯಿಂದ ಕುತ್ತಿಗೆಗೆ ಕೈಹಾಕಿ ಸಾಯಬಡಿದ ಈ ರಾಕ್ಷಸರು ವಜ್ರದ ಪೆಟ್ಟಿನಿಂದ ಉರುಳಿ ಬಿದ್ದ ಪರ್ವತಗಳಂತೆ ಕಂಗೊಳಿಸುವರು.

೩ ನೆ—ಇತ್ತ ಇವರನ್ನೂ ನೀವಿಬ್ಬರೂ ನೋಡಬೇಕು. ಕಪಿಸೈನ್ಯವನ್ನು ಕೊಲ್ಲುವಸಲುವಾಗಿ ಸುತ್ತಲೂ ವಿಮಲ ಖಡ್ಗಗಳನ್ನು ತಳೆದು ಬಿರುನೋಟದಿಂದ ಸಿಟ್ಟನ್ನು ಕಾರುತ್ತ, ನಿರ್ಮಲವಾದ ಕೋರೆಗಳನ್ನು ಕಿರಿದು, ಕಾರ್ಮುಗಿಲಿನಂತೆ ಕಂಗೊಳಿಸುವ ರಾಕ್ಷಸರು ಬೇಗನೆ ಬಾಯ್ತೆರೆದು ಮೇಲೆ ಬೀಳುತ್ತಿರುವರು.

೧ ನೆ—ಆಹಾ! ರಾಕ್ಷಸರು ಕಪಿಗಳಮೇಲೆ ಬಾಣಗಳನ್ನು ಸುರಿಸುತ್ತಿರುವರು.

೨ ನೆ—ವಾನರರು ರಾಕ್ಷಸರಮೇಲೆ ಬೆಟ್ಟಗಳನ್ನು ಎಸೆಯುತ್ತಿರುವರು,

೩ ನೆ—ಮುಷ್ಟಿಘಾತದಿಂದಲೂ, ಮೊಣಕಾಲಿನ ಗುದ್ದುಗಳಿಂದಲೂ,

ಮೂವರೂ—ಭಲೆ! ಭಯಂಕರವಾದ ಯುದ್ಧಕ್ಕೆ ಮೊದಲಾಯಿತು.

೧ ನೆ—ನೀವಿಬ್ಬರೂ ರಾವಣನನ್ನು ಸ್ವಲ್ಪ ನೋಡಿರಿ. ಚಿನ್ನದ ಹಿಡಿಯುಳ್ಳ ಶಕ್ತ್ಯಾಯುಧವನ್ನು ಅಲ್ಲಾಡಿಸುತ್ತ ವಿಕಾರವಾದ ಕೋರೆಗಳುಳ್ಳ ರಥವನ್ನು ನಡೆಯಿಸಿಕೊಂಡು, ಉದಯಪರ್ವತ ಶಿಖರದಲ್ಲಿ ಪೂರ್ಣಚಂದ್ರನನ್ನು ಕಂಡ ರಾಹುವಿನಂತೆ, ರಾಮನನ್ನು ಕಂಡು ರುಷ್ಟನಾಗಿರುವನು.

೨ ನೆ—ನೀವಿಬ್ಬರೂ ರಾಮನನ್ನು ನೋಡಿರಿ.

ಎಡಗಯ್ಯಿಂದ ಬಿಲ್ಲನ್ನು ಹಿಡಿದು, ಮತ್ತೊಂದರಿಂದ ಬಾಣವನ್ನು ತಿರುಗಿಸುತ್ತ ನೆಲದಮೇಲೆ ನಿಂತು, ರಥದಲ್ಲಿ ಕುಳಿತಿರುವ ಹಗೆಯನ್ನು ನೋಡುತ್ತಿರುವ ವೀರನಾದ ರಾಮನು ಯುದ್ಧದಲ್ಲಿ ಕ್ರೌಂಚಪರ್ವತವನ್ನು ನೋಡುತ್ತಿರುವ ಕಾರ್ತಿಕೇಯನಂತೆ ಕಂಗೊಳಿಸುವನು.

೩ ನೆ—ಹ! ಹ!! ಹ!!! ರಾವಣನು ಬಿಟ್ಟ ಕಾಲಾಂತಕ ಸದೃಶವಾದ ಶಕ್ತಿಯನ್ನು ಬಿಲ್ಲುಗಾರನಾದ ರಾಮನು ಮುಗುಳು ನಗೆನಗುತ್ತ ಎರಡು ಭಾಗವಾಗಿ ಕತ್ತರಿಸಿದನು.

೧ ನೆ—ಶಕ್ತಿಯು ಬಿದ್ದುದನ್ನು ಕಂಡು ಸಿಟ್ಟಿನ ಬಿರಿನೋಟವುಳ್ಳ ರಾವಣನು ರಾಮನಮೇಲೆ ಅಂಬಿನ ಮಳೆಯನ್ನು ಸುರಿಸುತ್ತಿರುವನು.

೨ ನೆ—ಆಹಾ! ರಾಮನ ಕಾಂತಿಯು ಮನೋಹರವಾಗಿರುವುದು ರಾವಣಮೇಘದಿಂದ ಬೀಳುವ ಬಾಣಧಾರೆಯು ಗೂಳಿಯಮೇಲೆ ಬೀಳುವ ಉದಕಧಾರೆಯಂತೆ ರಾವಣನ ಶರೀರದ ಮೇಲೆ ಹೊಳೆಯುತ್ತಿರುವುದು.

ಈ ರಾಮನು—

೩ ನೆ—ರಣಮುಖದಲ್ಲಿ ಘೋರವಾದ ಚಿನ್ನದ ಬಿಲ್ಲನ್ನು ಹಿಡಿದು, ಭೀಕರವಾದ ಬಾಣಜಾಲವನ್ನು ಎಸೆಯುತ್ತ, ರಥದಲ್ಲಿ ಕುಳಿತ ಹಗೆಯನ್ನು ಕಾಲ್ನಡೆಯಿಂದಲೇ ಹಿಂದಕ್ಕೆ ಅಟ್ಟಿ ಮದ್ದಾನೆಯನ್ನು ಇದಿರಿಸಿದ ತೀಕ್ಷ್ಣದಂಷ್ಟ್ರಯುಕ್ತವಾದ ಸಿಂಹದಂತೆ ಮುಂದೆ ನಡೆದು ಬರುತ್ತಿರುವನು.

ಮೂವರೂ—ಎಲಾ! ಏನಿದು? ಈ ಪ್ರದೇಶವು ಪ್ರಭಾಪುಂಜರಂಜಿತವಾಗಿರುವುದು! ಇದೇನಾಗಿರಬಹುದು?

೧ ನೆ—ಸಾಮಾನ್ಯವಾಗಿ ಯುದ್ಧವೆಂದರೆ ಸಂದೇಹ ಪಡುವ ಇಂದ್ರನು ಮಾತಲಿಯುಕ್ತವಾದ ರಥವನ್ನು ಕಳುಹಿಸಿರುವನು.

೨ ನೆ—ಪತ್ತಿರಬಂದ ಮಾತಲಿಯನ್ನು ಕಂಡು, ಆವನ ಮಾತಿನಂತೆ ರಾಮನು ರಥವನ್ನು ಏರಿದನು.

೩ ನೇ—ಈತನು—ಈ ರಾಕ್ಷಸ ಕುಲಾಂತಕನು—ದೇವತೆಗಳ ಹೆಮ್ಮೆಗೆ ಗುರುವಿನಂತಿರುವ, ದೈತ್ಯವಿನಾಶಕವಾದ ಈ ರಥದಲ್ಲಿ ಕುಳಿತು ತ್ರಿಪುರವಧೆಯಕಾಲದ ಶಿವನಂತೆ ಕಂಗೊಳಿಸುವನು.

೧ ನೇ—ಓಹೋ! ಘೋರಯುದ್ಧಕ್ಕೆ ಮೊದಲಾಯಿತು. ಒಬ್ಬರ ಬಾಣವನ್ನು ಮತ್ತೊಬ್ಬರ ಬಾಣವು ನುಂಗುತ್ತಿರುವ ನರವರ ರಾಕ್ಷಸರ ಯುದ್ಧವನ್ನು ನೋಡಿ, ವಿವಿಧ ಶಸ್ತ್ರಪಾತಗಳನ್ನು ನಿಲ್ಲಿಸಿ, ಕಪಿ, ರಾಕ್ಷಸ ಸೈನಿಕರು ಮೈಮರೆತು ನಿಂತುಬಿಟ್ಟರು.

೨ ನೇ—ಅಹಾ! ರಥಗಳಲ್ಲಿ ಕುಳಿತು ಅಸ್ತ್ರಗಳಿಂದಲೇ ಹೋರಾಡುತ್ತ, ಬಾಣಸಮೂಹವನ್ನು ಉಗುಳುತ್ತಲಿರುವ ಇವರಿಬ್ಬರೂ, ತಮ್ಮ ಕಿರಣಜಾಲದಿಂದ ಭೂಮಿಯನ್ನು ಸುಡತೊಡಗಿ, ಅಂತರಿಕ್ಷದಲ್ಲಿ ಸಂಚರಿಸುವ ಇಬ್ಬರು ಸೂರ್ಯರಂತೆ ಕಂಗೊಳಿಸುವರು.

೩ ನೇ—ಇತ್ತ ರಾವಣನನ್ನೂ ನೀವಿಬ್ಬರೂ ನೋಡಿರಿ. ಶೀಘ್ರಗಮನವುಳ್ಳ ಬಾಣಗಳಿಂದ ಕುದುರೆಗಳನ್ನು ಸದೆಬಡಿದು, ಬೇಗನೆ ಬಿಲ್ಲನ್ನು ಕತ್ತರಿಸಿ, ವೇಗವಾಗಿ ಬಾಣವೃಷ್ಟಿಯನ್ನು ಸುರಿಸಿ, ಗರ್ಜಿಸುತ್ತ, ನರದೇವನನ್ನು ಬಹಳವಾಗಿ ಪೀಡಿಸುತ್ತ ಪರಿಹಾಸಮಾಡುತ್ತಿರುವನು.

೧ ನೇ—ಈಗ ರಾಮನು—ಮೈಯ್ಯನ್ನು ಕುಗ್ಗಿಸಿ, ಸ್ವಲ್ಪ ಸಮಾಧಾನವನ್ನು ಪಡೆದು ತೀವ್ರವಾದ ಬಾಣವನ್ನು ನೋಡಿ, ಸಿಟ್ಟಿನಿಂದ ಕಣ್ಣುಗಳನ್ನು ಕೆಂಪಡರಿಸಿ, ಮಧ್ಯಾಹ್ನ ಸೂರ್ಯನಂತೆ ಕ್ರುದ್ಧನಾಗಿ, ತಾನು ಕ್ಷತ್ರಿಯಕುಲಾವತಂಸನಾಗಿದ್ದರೂ ಮಾತಲಿಯ ಮಾತಿನಂತೆ ಶೌರ್ಯವನ್ನು ಇಮ್ಮಡಿಯಾಗಿಸಿ ಅಮೋಘವಾದ ಬ್ರಹ್ಮಾಸ್ತ್ರವನ್ನು ಸಂಧಾನಮಾಡಿದನು.

೨ ನೇ—ಆಹಾ! ಈ ಅಸ್ತ್ರವು—ಸೂರ್ಯಾಗ್ನಿಗಳಂತೆ ತೀಕ್ಷ್ಣಧಾರೆಯನ್ನು ಧರಿಸಿದ ಈ ಅಸ್ತ್ರವು ರಘುವರನ ಭುಜವೇಗದಿಂದ ಸರ್ರನೆ ಹೊರಟು ರಜನಿಚರನಾಯಕನನ್ನು ಕೊಂದು ಬೇಗನೆ ರಾಮನ ಬಳಿಗೆ ಹೋಗುತ್ತಿರುವುದು.

ಮೂವರು—ಭಲಾ! ರಾವಣನು ಉರುಳಿ ಬಿದ್ದನು.

೧ ನೇ—ರಾವಣನು ಹತನಾದುದನ್ನು ಕಂಡು ಪೂಮಳೆಯು ಬೀಳುತ್ತಿರುವುದು. ದೇವದುಂದುಭಿಗಳು ಗಂಭೀರವಾಗಿ ಮೊಳಗುತ್ತಿರುವುವು.

೨ ನೇ—ಆಗಲಿ ದೇವಕಾರ್ಯವು ಸಿದ್ಧಿಸಿತು.

೧ ನೇ—ಆದುದರಿಂದ ಬನ್ನಿ. ಸರ್ವಪ್ರಿಯನಾದ ರಾಮನನ್ನು ನಾವೂ ಮನ್ನಣೆಮಾಡುವ.

ಇಬ್ಬರೂ—ಒಳ್ಳೆಯದು. ಮುಖ್ಯವಾದುದು.

(ಎಂದೆಲ್ಲರೂ ತೆರಳುವರು).

ಇಂತಿದು ವಿಷ್ಕಂಭಕವು.

———— :೦: ————

(ರಾಮನ ಪ್ರವೇಶ.)

ರಾಮ—ಬಾಣವೇಗದಿಂದ ರಾವಣನನ್ನು ಪೀಡಿಸಿ, ಕೊಂದು, ಶುಭವುಳ್ಳವನಾದ ವಿಭೀಷಣನನ್ನು ಲಂಕಾಧಿಪತಿಯನ್ನು ಮಾಡಿ ವಿಶೇಷ ಧೈರ್ಯೋತ್ಸಾಹಗಳಿಂದ ಸಾಧ್ಯವಾದ ಪ್ರತಿಜ್ಞಾಸಮುದ್ರವನ್ನು ತೋಳುಗಳಿಂದ ದಾಟಿ ಸೀತೆಯನ್ನು ಸಂತೈಸುವ ಸಲುವಾಗಿ ಲಂಕೆಗೆ ತೆರಳುವೆನು.

ಲಕ್ಷ್ಮಣ—(ಪ್ರವೇಶಿಸಿ) ಆರ್ಯನಿಗೆ ಮಂಗಳವಾಗಲಿ. ಆರ್ಯಾಪೂಜ್ಯೆಯಾದ ದೇವಿಯು ಆರ್ಯನ ಸಮೀಪಕ್ಕೆ ಬರುತ್ತಿರುವಳು.

ರಾಮ—ವತ್ಸ ಲಕ್ಷ್ಮಣ! ಶತ್ರುಮಂದಿರದಲ್ಲಿ ವಾಸಮಾಡುವಿಕೆಯಿಂದ ಅಪಾಯಸಂಭವವಿರುವ ಕಾರಣ, ವೈದೇಹಿಯನ್ನು ಕಂಡ ನನ್ನ ಧೈರ್ಯವನ್ನು ಕೋಪವು ಅಡ್ಡಗಿಸುತ್ತಿರುವುದು.

ಲಕ್ಷ್ಮಣ—ಆರ್ಯನ ಅಪ್ಪಣೆ. (ಎಂದು ತೆರಳಿದನು.)

ವಿಭೀ—(ಪ್ರವೇಶಿಸಿ) ಸ್ವಾಮಿಯು ಜಯಶೀಲನಾಗಲಿ. ರಾಜನೆ! ನಿನ್ನ ಧರ್ಮಪತ್ನಿಯಾದ ಈಕೆಯು, ನಿನ್ನ ಬಾಹುವೀರ್ಯದಿಂದ ದುಃಖವನ್ನು ನೀಗಿ, ಹಿಂದೆ ದೈತ್ಯಕುಲಚ್ಯುತವಾದ ಲಕ್ಷ್ಮಿಯಂತೆ ನಿನ್ನ ಅನುಗ್ರಹದಿಂದ ಮರಳಿ ನಿನ್ನನ್ನೇ ಬಂದು ಸೇರಿದಳು.

ರಾಮ—ವಿಭೀಷಣಾ! ರಾಕ್ಷಸ ಕರಸ್ಪರ್ಶದೂಷಿತೆಯಾಗಿ ಇಕ್ಷ್ವಾಕುಕುಲಕ್ಕೆ ಕಳಂಕದಂತಿರುವ ಕಾರಣ ಸ್ವಲ್ಪ ಅಲ್ಲಿಯೇ ಇರಲಿ. ಲಂಕೇಶ್ವರಾ! ಅರಸನೂ, ಜನಕನೂ, ಎನಿಸಿದ ದಶರಥನ ಸಲುವಾಗಿ ನನ್ನನ್ನು ನೋಡುವುದಕ್ಕೆ ತಕ್ಕವಳಲ್ಲ. ಮತ್ತೂ ರಾಜನೆ! ಅಕಾರ್ಯವಾದ ವಿಷಯದಲ್ಲಿ ಮುಳುಗುತ್ತಿರುವವನನ್ನು ಯಾವನು ಅಡ್ಡಗಿಸುವನೋ ಅವನೇ ಮಿತ್ರನು. ಅದಕ್ಕೆ ವ್ಯತ್ಯಸ್ತವಾದರೆ ಹಗೆಯೇ ಸರಿ.

ವಿಭೀ—ಸ್ವಾಮಿಯು ಪ್ರಸನ್ನನಾಗಬೇಕು.

ರಾಮ—ಇನ್ನು ಮುಂದೆ ನೀನು ನನ್ನನ್ನು ಪೀಡಿಸಬಾರದು.

ಲಕ್ಷ್ಮಣ—(ಪ್ರವೇಶಿಸಿ) ಆರ್ಯನ ಅಭಿಪ್ರಾಯವನ್ನು ಕೇಳಿದ ಕೂಡಲೇ ಆರ್ಯೆಯು ಅಗ್ನಿಪ್ರವೇಶಾರ್ಥವಾಗಿ ಅನುಗ್ರಹವನ್ನು ನಿರೀಕ್ಷಿಸುತ್ತಿರುವಳು.

ರಾಮ—ಲಕ್ಷ್ಮಣಾ! ಈ ಪತಿವ್ರತೆಯ ಮನೋವೃತ್ತಿಯನ್ನು ಅನುಸರಿಸು.

ಲಕ್ಷ್ಮಣ—ಆರ್ಯನ ಅಪ್ಪಣೆ ( ಎಂದು ನಡೆತಂದು ) ಅಯ್ಯೋ! ಕಷ್ಟ !

ದೇವಿಯ ಪರಿಶುದ್ಧವಾದ ನಡೆವಳಿಯನ್ನು ತಿಳಿದು, ಆರ್ಯರ ಶಾಸನವನ್ನು ಕೇಳಿ ಧರ್ಮಸ್ನೇಹಗಳ ನಡುವೆ ನನ್ನ ಬುದ್ಧಿಯು ಡೋಲಾಯಮಾನವಾಗಿರುವುದು. ಯಾರಲ್ಲಿ?

ಹನೂ—( ಪ್ರವೇಶಿಸಿ ) ಕುಮಾರನೆ! ಏನಪ್ಪಣೆ?

ಲಕ್ಷ್ಮಣ—ಹನೂಮನ್! ನಿನಗೆ ಶಕ್ತಿ ಇರುವುದಾದರೆ ಆರ್ಯನು ಈ ರೀತಿ ಅಪ್ಪಣೆ ಮಾಡಿರುವನು.

ಹನೂ—ಕುಮಾರನು ಈ ವಿಷಯದಲ್ಲಿ ಯೋಚಿಸುವುದಾದರೂ ಏತಕ್ಕೆ?

ಲಕ್ಷ್ಮಣ—ನನ್ನ ಯೋಚನೆಯು ನಿಷ್ಫಲ. ಅಥವಾ ನಾವು ಆರ್ಯನ ಅಭಿಪ್ರಾಯವನ್ನು ಅನುವರ್ತಿಸುವವರಷ್ಟೆ! ನಡೆ. ಹೋಗುವ.

ಹನೂ—ಕುಮಾರನ ಅಪ್ಪಣೆ ( ಎಂದಿಬ್ಬರೂ ತೆರಳುವರು )

ಲಕ್ಷ್ಮಣ—( ಪ್ರವೇಶಿಸಿ ) ಆರ್ಯನು ಪ್ರಸನ್ನನಾಗಬೇಕು. ಆರ್ಯ! ಆಶ್ಚರ್ಯವು! ಆಶ್ಚರ್ಯವು!

ಅರಳಿದ ಕೆಂದಾವರೆಯ ಮಾಲೆಯನ್ನು ಹೋಲುವ ಆರ್ಯೆಯು ನಿನ್ನ ಶ್ರಮವನ್ನೆಲ್ಲಾ ವ್ಯರ್ಥಗೊಳಿಸಿ, ಪ್ರಾಣದ ಆಶೆಯನ್ನು ತೊರೆದು, ಹಂಸಿಯು ಪದ್ಮವನವನ್ನು ಹುಗುವಂತೆ ಅಗ್ನಿಯನ್ನು ಪ್ರವೇಶಿಸುತ್ತಿರುವಳು.

ರಾಮ—ಆಶ್ಚರ್ಯ! ಆಶ್ಚರ್ಯ! ಲಕ್ಷ್ಮಣಾ, ಅಡ್ಡಗಿಸು. ಅಡ್ಡಗಿಸು.

ಲಕ್ಷ್ಮಣ—ಆರ್ಯನ ಅಪ್ಪಣೆ.

ಹನೂ—( ಪ್ರವೇಶಿಸಿ ) ಪಾವನೆಯಾದ ಈಕೆಯು, ಪುಟಹಾಕಿದ ಚಿನ್ನದಂತೆ, ಬೆಂಕಿಯನ್ನು ಹೊಕ್ಕು ಕಾಂತಿಯಿಂದ ನಿರ್ವಿಕಾರವಾಗಿ ಅಗ್ನಿಯಿಂದ ಹೊರಕ್ಕೆ ಬಂದಳು.

ರಾಮ—( ಆಶ್ಚರ್ಯದಿಂದ ) ಏನು, ಏನು?

ಲಕ್ಷ್ಮಣ—ಆಹಾ! ಆಶ್ಚರ್ಯವು!

ಸುಗ್ರೀವ—( ಪ್ರವೇಶಿಸಿ ) ಸ್ವಾಮಿಗೆ ಜಯವಾಗಲಿ.

ಸಚೇತನೆಯಾದ ಜನಕನಂದಿನಿಯನ್ನು ಹಿಡಿದುಕೊಂಡು, ನಮಸ್ಕರಿಸುವುದಕ್ಕೆ ಯೋಗ್ಯವಾದ ರೂಪವನ್ನು ತಳೆದ ಈತನಾರು? ಉರಿಯುತ್ತಿರುವ ಬೆಂಕಿಯಿಂದ ಬರುತ್ತಿರುವನು!

ಲಕ್ಷ್ಮಣ—ಆಹಾ! ಭಗವಂತನಾದ ಯಜ್ಞಪುರುಷನು ಆರ್ಯೆಯನ್ನು ಮುಂದುಮಾಡಿ ಇತ್ತಲೇ ಬರುತ್ತಿರುವನು.

ರಾಮ—ಓಹೋ! ಪೂಜ್ಯನಾದ ಅಗ್ನಿದೇವನೇ ಈತನು! ಹತ್ತಿರ ಹೋಗುವ! ( ಎಂದೆಲ್ಲರೂ ಹತ್ತಿರಬರುವರು )

( ಸೀತೆಯೊಡನೆ ಅಗ್ನಿಯ ಪ್ರವೇಶ )

ಅಗ್ನಿ—ಈತನಲ್ಲವೇ ಭಗವಂತನಾದ ನಾರಾಯಣನು! ಸ್ವಾಮಿಗೆ ಮಂಗಳವಾಗಲಿ.

ರಾಮ—ಭಗವನ್! ವಂದಿಸುವೆನು.

ಅಗ್ನಿ—ದೇವಸಾರ್ವಭೌಮನು ನನಗೆ ನಮಸ್ಕರಿಸಬಾರದು.

ರಾಜೇಂದ್ರಾ! ಪುರುಷೋತ್ತಮಾ! ಸರ್ವಲೋಕ ನಮಸ್ಕೃತೆಯೂ, ಪಾಪರಹಿತಳೂ, ಶುದ್ಧಚರಿತೆಯೂ, ದೋಷಶೂನ್ಯೆಯೂ ಎನಿಸಿದ ಈ ಜಾನಕಿಯನ್ನು ಪರಿಗ್ರಹಿಸು. ಮತ್ತು ಈ ಜನಕ ನಂದಿನಿಯನ್ನು ಪೂಜ್ಯೆಯಾದ ಲಕ್ಷ್ಮಿಯೆಂದು ತಿಳಿ. ಮಾನುಷ ದೇಹವನ್ನು ತಳೆದು ನಿನ್ನನ್ನು ಸೇರಿರುವಳು.

ರಾಮ—ಅನುಗ್ರಹೀತನಾದೆನು.

ಹವ್ಯವಾಹನಾ ವೈದೇಹಿಯ ಶುದ್ಧ ಚರಿತೆಯನ್ನು ತಿಳಿದವನಾಗಿದ್ದರೂ ಲೋಕದ ಮೆಚ್ಚಿಕೆಯ ಸಲುವಾಗಿ ನಾನಿಂತು ಮಾಡಿದೆನು.

( ತೆರೆಯಲ್ಲಿ ದೇವಗಂಧರ್ವರು ಗಾನಮಾಡುವರು )

ತ್ರೈಲೋಕ್ಯ ಕಾರಣನಾದ ನಾರಾಯಣನೇ! ನಮಸ್ಕರಿಸುವೆವು.

ತ್ರಿಜಗತ್ಪತೆ! ಬ್ರಹ್ಮನೇ ನಿನ್ನ ಹೃದಯವು. ರುದ್ರನೇ ನಿನ್ನ ಕೋಪವು. ದೇವದೇವಾ! ಚಂದ್ರಸೂರ್ಯರೇ ನಿನ್ನ ಕಣ್ಣುಗಳು. ಭಾರತಿಯೇ ನಿನ್ನ

ನಾಲಿಗೆ. ಪ್ರಭೋ! ಬ್ರಹ್ಮನೇ ಮೊದಲಾದ ದೇವಗಣವೆಲ್ಲವೂ ನಿನ್ನಿಂದಲೇ ಉಂಟಾಯಿತು. ಈ ಸೀತೆಯು ಕಮಲವಾಸ ರಸಿಕೆಯಾದ ಲಕ್ಷ್ಮಿ; ನೀನೇ ವಿಷ್ಣುವು. ಪರಿಗ್ರಹಿಸಬೇಕು.

( ತೆರೆಯಲ್ಲಿ ಬೇರೊಂದು ಕಡೆ ಗಾನಮಾಡುವರು )

ಈ ಭೂಮಿಯು ನೀರಿನಲ್ಲಿ ಮುಳುಗಿದ್ದಾಗ ವರಾಹರೂಪದಿಂದ ನೀನೇ ಉದ್ಧರಿಸಿದೆ. ಸುರನಾಯಕಾ! ಲೋಕತ್ರಯವನ್ನೂ ಮೂರು ಹೆಜ್ಜೆಗಳಿಂದ ಆಕ್ರಮಿಸಿದೆ. ಇಂತು ಸ್ವೇಚ್ಛಾರೂಪಧಾರಿಯಾದ ನೀನು ಈಗ ರಾವಣನನ್ನು ಯುದ್ಧದಲ್ಲಿ ಕೊಂದು ದೇವತೆಗಳನ್ನು ಸಂತೋಷಗೊಳಿಸಿದಂತೆ ದೇವಿಯನ್ನು ಸಂತೈಸಲಿಲ್ಲ.

ಅಗ್ನಿ---ಭದ್ರಮುಖ! ದೇವ, ದೇವರ್ಷಿ, ಸಿದ್ಧ, ವಿದ್ಯಾಧರ, ಗಂಧರ್ವಾಪ್ಸರೋಗಣಗಳು ತಮ್ಮ ವಿಭವದಿಂದ ಸ್ವಾಮಿಯನ್ನು ಹಾರೈಸುತ್ತಿರುವರು.

ರಾಮ— ಅನುಗ್ರಹೀತನಾದೆನು.

ಅಗ್ನಿ—ಮಂಗಳಾಂಗ! ಅಭಿಷೇಕಾರ್ಥವಾಗಿ ಇತ್ತ, ಇತ್ತ ಬಾ.

ರಾಮ—ಭಗವಂತನ ಅಪ್ಪಣೆ. ( ಎಂದು ತೆರಳುವರು )

( ತೆರೆಯಲ್ಲಿ )

ದೇವಾ! ಜಯಶೀಲನಾಗು. ಸ್ವಾಮಿನ್, ಮಂಗಳವಾಗಲಿ. ಮಂಗಳಾಂಗ, ಶ್ರೀಯೋವಂತನಾಗು. ಮಹಾರಾಜನೆ, ಸರ್ವೋತ್ತಮನೆನಿಸಿರು. ರಾವಣಾಂತಕ! ವಿಜಯವಂತನೆನಿಸು. ಆಯುಷ್ಮಂತನೇ, ಚಿರಂಜೀವಿಯಾಗಿರು.

ವಿಭೀ—ಈ ನಮ್ಮ ಮಹಾರಾಜನು-ಯುದ್ಧದಲ್ಲಿ ಪ್ರತಿಜ್ಞಾಜಲಧಿಯನ್ನು ದಾಟಿ, ಪಾಪರಹಿತೆಯಾದ ದೇವಿಯನ್ನು ಹೊಂದಿ, ಸಕಲ ದೇವತೆಗಳಿಂದಲೂ ಪಟ್ಟಾಭಿಷಿಕ್ತನಾಗಿ ,ನಿರ್ಮಲವಾದ ಅಂತರಿಕ್ಷದಲ್ಲಿ ಚಂದ್ರನಂತೆ ಕಂಗೊಳಿಸುವನು.

ಲಕ್ಷ್ಮಣ— ಆರ್ಯನ ವೈಷ್ಣವ ತೇಜಸ್ಸು ಎಷ್ಟು ಮನೋಹರವಾಗಿರುವುದು.

ದಶರಥವಾಕ್ಯಾನುಸಾರವಾಗಿ ಯಮ, ವರುಣ, ಕುಬೇರ, ವಾಸವನೇ ಮುಂತಾದ ದೇವವರ್ಗದಿಂದ ಸುತ್ತುವರಿಯಲ್ಪಟ್ಟು, ದೇವರಾಜ್ಯಾಧಿಕಾರವನ್ನು ಪಡೆದ ವೃತ್ರಾರಿಯಂತೆ ಕಂಗೊಳಿಸುವನು.

( ಪಟ್ಟಾಭಿಷಿಕ್ತನಾದ ರಾಮನು ಸೀತೆಯೊಂದಿಗೆ ಪ್ರವೇಶಿಸುವನು )

ವತ್ಸ ಲಕ್ಷ್ಮಣಾ!

ಹಿಂದೆ ಮಂಗಳಾರ್ಥವಾಗಿ ಹಸ್ತದಲ್ಲಿ ಕಂಕಣವನ್ನು ಕಟ್ಟಿಸಿ, ಭದ್ರಾಸನದ ಮೇಲೆ ಕೂಡ್ರಿಸಿದ್ದರೂ, ತಾಯಿಯ ಪ್ರೀತಿಯ ಸಲುವಾಗಿ ಯಾವಾತನು ನನ್ನ ಅಭಿಷೇಕಕ್ಕೆ ವಿಘ್ನಕಾರಿಯಾಗಿ ದೈವಗತಿಯನ್ನು ಹೊಂದಿದನೋ ಅದೇ ಗುರುವು ಈಗ ವೈದೋರಿ ಪ್ರಹೃಷ್ಟಮನಸ್ಕನಾಗಿ ನನ್ನ ಅಭಿಷೇಕವನ್ನು ನಡೆಯಿಸಿದನು.

ಅಗ್ನಿ—ಭದ್ರಮುಖ! ಮಹೇಂದ್ರನ ಶಾಸನದಂತೆ ಭರತ ಶತ್ರುಘ್ನರೇ ಮುಂತಾದ ಪ್ರಕೃತಿಮಂಡಲವು ನಿನ್ನನ್ನು ಸೇವಿಸುತ್ತಿರುವದು.

ರಾಮ—ಭಗವಾನ್! ಬಹಳಸಂತೋಷವಾಯಿತು.

ಅಗ್ನಿ—ಇಂದ್ರನೇ ಮುಂತಾದ ಅಮೃತಾಶನರು ನಿನ್ನ ಮೇಲ್ಮೆಯನ್ನು ಹಾರೈಸುತ್ತಿರುವರು.

ರಾಮ—ಅನುಗ್ರಹೀತನಾದೆನು.

ಅಗ್ನಿ—ಭದ್ರಮುಖ! ನಿನಗೆ ಇನ್ನೂ ಯಾವ ಪ್ರಿಯವನ್ನು ಸಂಪಾದಿಸಿಕೊಡಬೇಕು.

ರಾಮ—ಭಗವಂತನು ನನ್ನ ವಿಷಯದಲ್ಲಿ ಪ್ರಸನ್ನನಾದ ಬಳಿಕ ಇದಕ್ಕಿಂತಲೂ ಇನ್ನಾವ ಪ್ರಿಯವನ್ನು ಬಯಸಲಿ?

( ಭರತವಾಕ್ಯ )

ಗೋವುಗಳು ರಜೋಹೀನಗಳಾಗಿರಲಿ, ಪರಚಕ್ರವು ಶಾಂತಿಯನ್ನೈದಲಿ, ಈ ಸಮಸ್ತ ಭೂಮಿಯನ್ನೂ ನಮ್ಮ ರಾಜಸಿಂಹನು ಶಾಸನಮಾಡಲಿ.

ಎಂದೆಲ್ಲರೂ ತೆರಳುವರು.

ಶುಭಂ ಭೂಯಾತ್

---

ಸಮಾಪ್ತ